## ಕ್ಷೇತ್ರ ವಾರ್ತೆಗಳು




ಬೆಂಗಳೂರು: ಶ್ರೀ ಎಂ. ಸದಾಶಿವಪ್ಪ ಅಭಿನಂದನೆ, ದಿನಾಂಕ. ೩.೦೧.೨೦೨೨
ಅಭಿನಂದಿತರು: ಎಂ. ಸದಾಶಿವಪ್ಪ ದಂಪತಿಗಳು
ಚಿತ್ರದಲ್ಲಿ: ಶಂಭು ಎನ್. ಕೆ.ವಿ. ನಾಗರಾಜಮೂರ್ತಿ, ಎಸ್. ಮಹಾದೇವಯ್ಯ
ಗೊ.ರು. ಚನ್ನಬಸಪ್ಪ, ಮುಖ್ಯಮಂತ್ರಿ ಚಂದ್ರು



ಕದಳಿ ಮಹಿಳಾ ವೇದಿಕೆ, ಮೈಸೂರು: ಪೂಜ್ಯ ಶ್ರೀ ಜಡೆ ಮಹಾಂತ ಸ್ವಾಮಿಗಳ ದತ್ತಿ ಮತ್ತು ಪೂಜಶ್ರೀ
ಡಾ. ಇಮ್ಮಡಿ ಶಿವಬಸವ ಸ್ವಾಮಿಗಳ ದತ್ತಿ. ದಿನಾಂಕ: ೧೦.೧.೨೦೨೨
ವೇದಿಕೆಯಲ್ಲಿ: ಪ್ರೊ. ಮಲೆಯೂರು ಗುರುಸ್ವಾಮಿ, ಪ್ರೊ. ಕೆ.ಬಿ. ಪ್ರಭುಪ್ರಸಾದ್, ಪೂಜ್ಯ ಡಾ. ಶರತ್ ಚಂದ್ರ ಸ್ವಾಮಿಗಳು
ಶಾರದಾ ಶಿವಲಿಂಗಸ್ವಾಮಿ, ಸತೀಶ್, ಮ.ಗು. ಸದಾನಂದಯ್ಯ, ಜಯಗೌಡ ಇತರರು.



ವಿಜಯಪುರ: ಲಿಂ. ಭೀಮಶೆಪ್ಪ ಕುಂಬಾರ ದತ್ತಿ ಹಾಗೂ ಲಿಂ. ಗುರುಬಸಪ್ಪ ಇಂಗಳೇಶ್ವರ ದತ್ತಿ ಕಾರ್ಯಕ್ರಮ
ದಿನಾಂಕ :೦೩.೦೧.೨೦೨೨, ಚಿತ್ರದಲ್ಲಿ: ಸಂತೋಷ ನಿಗಡಿ, ಶಿವಯೋಗಿ ನಾಡಗೌಡ, ಅಮರೇಶ ಸಾಲಕ್ಕಿ,
ಶಾಜು ಜೋಸೆಫ್, ಜಂಬುನಾಥ ಕಂಚ್ಯಾಣಿ, ಸಿದ್ದಲಿಂಗಪ್ಪ ಹದಿಮೂರ, ನಾಡಗೌಡ



# ಮಹಾಮನೆ

ಸಂಪುಟ ೨೪ : ಸಂಚಿಕೆ ೦೮ ಮಾರ್ಚ್ - ೨೦೨೨

ಸಂಪಾದಕರು
**ಡಾ. ಎಂ.ಎಸ್. ಆಶಾದೇವಿ**



ಪ್ರಕಾಶಕರು
**ಗೊ.ರು. ಚನ್ನಬಸಪ್ಪ**
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು





**ಆಡಳಿತ ಕಾರ್ಯಾಲಯ**
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೧ನೆಯ ಮುಖ್ಯ ರಸ್ತೆ, ಜಯನಗರ ೮ನೆಯ ವಿಭಾಗ
ಬೆಂಗಳೂರು ೫೬೦ ೦೭೦, ದೂ: ೦೮೦ ೨೬೬೭ ೦೧೨೫
E-mail: mahamanemagazine@gmail.com





## ಸಂಚಿಕೆಯ ಅಂತರಂಗ

ಬಿನ್ನಹ ...... 

## ಪ್ರೀತಿಗೆ ಶಾಂತಿಗೆ ಜಯವಿಹುದೆಂದು. . . .

ಇತಿಹಾಸದ ಪ್ರಾಥಮಿಕ ಪಠ್ಯಗಳಲ್ಲಿ, ಬಾಲ್ಯಕಾಲದ ಕಥೆಗಳಲ್ಲಿ, ಜನಪದ ಕಥೆಗಳಲ್ಲಿ ಪುನರುಕ್ತವಾಗುವ ರಮ್ಯ ಹೇಳಿಕೆಯೊಂದಿದೆ. 'ಅದು ಶಾಂತಿ ಮತ್ತು ಸುಭಿಕ್ಷದ ಕಾಲವಾಗಿತ್ತು, ಅಲ್ಲಿ ಎಲ್ಲರೂ ಸುಖವಾಗಿದ್ದರು'. ಈ ಮಾತುಗಳನ್ನು ಈಗ ಓದಿದರೆ ನಗುವೂ ಬರದಷ್ಟು, ನಿರ್ಲಕ್ಷಿಸಲೂ ಆಗದಷ್ಟು ದುರಿತಕಾಲದಲ್ಲಿ ನಾವಿದ್ದೇವೆ. ಇಂಥ ಹೇಳಿಕೆಗಳು ಅಸಂಭವನೀಯತೆಯನ್ನು ಮಾತ್ರವಲ್ಲ, ವ್ಯಂಗ್ಯದ ಕೂರಲಗಿನಂತೆ ನಮ್ಮನ್ನು ಇರಿಯುತ್ತವೆ. ಮನುಷ್ಯರಿಗೆ ಸ್ವರ್ಗವನ್ನು ಸೃಷ್ಟಿಸುವ ಶಕ್ತಿಯಿದೆ, ಇದರಲ್ಲಿ ನಮಗೆ ಅಪನಂಬಿಕೆ ಇಲ್ಲ. ಮನುಷ್ಯನಿಗೆ ನರಕವನ್ನು ಸೃಷ್ಟಿಸುವ ಶಕ್ತಿ ಇದಕ್ಕಿಂತಲೂ ಅಪಾರವಾಗಿದೆ. ನಾವು ಆ ಶಕ್ತಿ ಪ್ರದರ್ಶನದ ಕಾಲದಲ್ಲಿಯೇ ಬದುಕುತ್ತಿದ್ದೇವೆ. ನಾಲ್ಕನೆಯ ಮಹಾಯುದ್ಧವನ್ನು ಯಾವ ಆಯುಧಗಳಿಂದ ಮಾಡುತ್ತಾರೋ, ನನಗೆ ಗೊತ್ತಿಲ್ಲ ಎನ್ನುವ ಐನ್‌ಸ್ಟೈನ್‌ನ ಮಾತು ನೆನಪಾಗುತ್ತಿದೆ. ಯುದ್ಧ ಮಾಡಲು ಬೇಕಾದ ಅತ್ಯಂತ ಭೀಕರವಾದ ಆಯುಧಗಳನ್ನು ನಾವೀಗ ಸೃಷ್ಟಿಸಿಕೊಂಡಿದ್ದೇವೆ. ಅಥವಾ ಹಿಂದೆಂದೂ ಬಳಕೆಯಾಗದ ಬಗೆಯಲ್ಲಿ ಆ ಆಯುಧಗಳನ್ನು ಹರಿತಗೊಳಿಸಿ – ಕೊಂಡಿದ್ದೇವೆ. ವರ್ಗ–ತಾರತಮ್ಯವೇ ಜಗತ್ತಿನ ಘೋರ ಪಾಪ ಎನ್ನುವ ನೈತಿಕವಾದಿಗಳನ್ನು ನೆನಪಿಸಿಕೊಂಡರೆ, ದುಃಖವಾಗುತ್ತದೆ. ಜಾತಿ ಮತ್ತು ಧರ್ಮಗಳು, ಧರ್ಮಗಳ ಸಂಘರ್ಷವು ಈ ಜಗತ್ತು ಹಿಂದೆಂದೂ ಊಹಿಸದ ಪ್ರಮಾಣ ಮತ್ತು ಸ್ವರೂಪಗಳಲ್ಲಿ ಮನುಷ್ಯರನ್ನು ಆವರಿಸಿ, ಆಳುತ್ತಿದೆ. ನಾಗರೀಕತೆಯ ಹೆಜ್ಜೆಗುರುತುಗಳನ್ನೆಲ್ಲಾ ನಾಶಮಾಡಿ, ಎಲ್ಲ ಬಗೆಯ ಮೂಲಭೂತವಾದಗಳು ಮನುಷ್ಯರನ್ನು ಶಿಲಾಯುಗಕ್ಕಿಂತಲೂ ಹಿಂದೆ ಕರೆದೊಯ್ಯುತ್ತಿರುವಂತೆ ಭಾಸವಾಗುತ್ತದೆ. ಯಾವ ಆಧುನಿಕತೆಯೂ ಮನುಷ್ಯ ನಿರ್ಮಿತ ತರ–ತಮಗಳ ಕಂದರವನ್ನು ಮುಚ್ಚುತ್ತದೆ, ಆ ಕಲ್ಮಶಗಳನ್ನು ನಾಶಮಾಡುತ್ತ ಮನುಷ್ಯ ಲೋಕವನ್ನು ಸ್ವಚ್ಛಗೊಳಿಸುತ್ತದೆ ಎಂದು ನಾವು ನಂಬಿದ್ದೆವೋ, ಅವೇ ಈಗ ಸಂಪೂರ್ಣ ತಿರುವು ಮುರುವಾಗಿ ವೇಷ ಬದಲಿಸಿಕೊಂಡು ಮನುಷ್ಯರನ್ನು ದಿನದಿಂದ ದಿನಕ್ಕೆ ಹೆಚ್ಚು ಹೆಚ್ಚು ಅಮಾನವೀಯಗೊಳಿಸುತ್ತಾ ಹೋಗುತ್ತಿವೆ. ಅಹಂಕಾರಗಳಲ್ಲೆಲ್ಲಾ ಧರ್ಮದ ಅಹಂಕಾರ ಮೂರ್ಖತನದಲ್ಲೇ ಮೂರ್ಖತನದ್ದು. ಮತ್ತು ಇದು ಎಂಥ ಕಾಯಿಲೆಯೆಂದರೆ ಇದಕ್ಕೆ ಮದ್ದನ್ನು ಅರೆಯುವುದು ಬಲುಕಷ್ಟ ಎನ್ನುತ್ತಾನೆ ತತ್ವಜ್ಞಾನಿಯೊಬ್ಬ.

ಕಾರ್ಲ್ ಮಾರ್ಕ್ಸ್ ಇದನ್ನೇ ಭಾರತದಂತಹ ರಾಷ್ಟ್ರಗಳಲ್ಲಿ ಜಾತಿ ಮತ್ತು ಧರ್ಮಗಳು





ಅಫೀಮಿನ ಪಾತ್ರವಹಿಸುತ್ತವೆ ಎನ್ನುತ್ತಾನೆ. ಅಫೀಮಿನಂತಹ ಮಾದಕ ದ್ರವ್ಯದ ಸೇವನೆಯು ನಮ್ಮ ವಿವೇಕ, ಬುದ್ಧಿಗಳನ್ನೆಲ್ಲಾ ನಾಶಮಾಡುವಂತೆ ಧರ್ಮಾಂಧತೆಯು ನಮ್ಮ ಎಲ್ಲಾ ಮಾನವೀಯತೆ, ವಿವೇಕಗಳನ್ನು ನಾಶಗೊಳಿಸಿ, ಮನುಷ್ಯನೊಳಗಿರುವ ರಾಕ್ಷಸನ ಅನಾವರಣ ಮಾಡುತ್ತದೆ.

ಇತ್ತೀಚೆಗೆ ನಡೆಯುತ್ತಿರುವ ಬದಲಾವಣೆಗಳು ಪ್ರಬುದ್ಧತೆಯ ದೃಷ್ಟಿಯಿಂದ ನಾವು ಚಲಿಸುತ್ತಿರುವುದು ಮುಂದಕ್ಕಲ್ಲ, ಹಿಂದೆ ಎನ್ನುವುದನ್ನು ಸಾಬೀತುಪಡಿಸುತ್ತಿವೆ. ಸರ್ವ ಜನಾಂಗದ ಶಾಂತಿಯ ತೋಟವಾಗಬೇಕೆಂದು ಹಂಬಲಿಸಿದ ಕುವೆಂಪು ಮತ್ತು ಅವರಂತಹ ಎಲ್ಲಾ ರಾಷ್ಟ್ರೀಯವಾದಿಗಳು ಕನಸಿದ ಭಾರತ ದೂರ ಹೋಗುತ್ತಿದೆ.

**ನೂರು ದೇವರನ್ನೆಲ್ಲ ನೂಕಾಚೆ ದೂರ**
**ಭಾರತಾಂಬೆಯ ದೇವಿ ನಮಗಿಂದು**
**ಪೂಜಿಸುವ ಬಾರ**
. . . . . . . . . . .
**ಗುಡಿ, ಚರ್ಚು, ಮಸಜೀದುಗಳ ಬಿಟ್ಟು ಹೊರಬನ್ನಿ**

ಎನ್ನುವ ಕುವೆಂಪು ಅವರ ಮಾತು ಕೇವಲ ಹೊಸ ರಾಷ್ಟ್ರದ ಕಲ್ಪನೆಯದ್ದಲ್ಲ. ಅದು ಹೊಸಧರ್ಮದ ಉದಯದ ಘೋಷ ವಾಕ್ಯಗಳು. ಆ ಧರ್ಮದ ಹೆಸರು 'ಭಾರತೀಯ ಧರ್ಮ' ಎನ್ನುವುದು. ಇದೇ ನಮ್ಮ ಮೂಲ ಧರ್ಮ, ಇದೇ ನಮ್ಮ ಮೂಲ ಮಂತ್ರ. ಇದನ್ನು ಅರಿಯದೆ ಹೋದರೆ ಒಕ್ಕೂಟ ವ್ಯವಸ್ಥೆಯಾಗಿರುವ ಭಾರತ ಆ ಒಕ್ಕೂಟದ ವ್ಯವಸ್ಥೆಯನ್ನು ಉಳಿಸಿಕೊಳ್ಳುವುದೇ ಕಷ್ಟವಾದೀತು.

ಹಾಗಿದ್ದರೆ ಇದರ ಹೊಣೆ ಯಾರದು? ಪ್ರಭುತ್ವದ್ದೋ? ನಾಯಕರದ್ದೋ? ಪ್ರಜೆಗಳದ್ದೋ? ಇದೊಂದು ಸಾಂಘಿಕ ಪ್ರಯತ್ನವಾಗಬೇಕು ಎನ್ನುವುದು ನಿಜ. ಆದರೆ, ಈ ಸಾಂಘಿಕ ಪ್ರಯತ್ನಕ್ಕೆ ಎಲ್ಲರ ಮನೋವಿನ್ಯಾಸವೂ ಒಂದೇ ಆಗಬೇಕಾದ್ದು ಮೂಲ ಅಗತ್ಯ. ನಮ್ಮ ಅಸ್ಮಿತೆಗಳನ್ನು ಜಾತಿ–ಧರ್ಮಗಳ ಹಿನ್ನೆಲೆಯಲ್ಲಿ ಗುರುತಿಸಿಕೊಳ್ಳುವುದು ನಮ್ಮ ಎರಡನೆಯ ಅಸ್ಮಿತೆಯಾಗಬೇಕು. ನಮ್ಮ ಮೊದಲ ಅಸ್ಮಿತೆ ಏನಿದ್ದರೂ, 'ಭಾರತೀಯ ಎನ್ನುವುದು ಮಾತ್ರ ಆಗಬೇಕು' ಇದು ತನ್ನಿಂತಾನೇ ಘಟಿಸುವಂಥದ್ದಲ್ಲ. ಇದಕ್ಕೆ ಇಚ್ಛಾಶಕ್ತಿ, ಕ್ರಿಯಾಶಕ್ತಿಗಳೆರಡೂ ಬೇಕು. ಅಷ್ಟೇ ಮುಖ್ಯವಾಗಿ ರಾಜಕೀಯ ಇಚ್ಛಾಶಕ್ತಿಯೂ ಬೇಕು. ಈ ಘಟ್ಟದಲ್ಲಿ ಕಲೆಯ ಪಾತ್ರವೂ ಬಲುದೊಡ್ಡದು. ಕಲೆ ಕಾಲಾತೀತವಾದುದೆಷ್ಟೋ ಧರ್ಮ ವರ್ಗಾತೀತವಾದುದೂ ಹೌದು. ಆದ್ದರಿಂದ ನಾವು ಕಲೆಯಿಂದಲೇ ನಮ್ಮ ಮೊದಲ ಪಾಠಗಳನ್ನು ಆರಂಭಿಸಬಹುದು.

'ಪ್ರೀತಿಗೆ ಶಾಂತಿಗೆ ಜಯವಿಹುದೆಂದು
ನಾಳಿನ ಬಾಗಿಲು ನಂದನವೆಂದು
ಎಲ್ಲರಿಗೊಳಿತನು ಬಯಸಲಿ ಕವನ'

– ಕೆ.ಎಸ್. ನರಸಿಂಹಸ್ವಾಮಿ

ಈ ವಿಷಮ ಸನ್ನಿವೇಶದಲ್ಲಿ ಹೊಣೆಗಾರಿಕೆಯು ಎಲ್ಲರ ಮೇಲೆಯೂ ಇದೆ. ಸಾಮಾನ್ಯರು, ಪ್ರಭುತ್ವ ಮತ್ತು ನಾಯಕರು ಎಲ್ಲರೂ ಅಪಾರ ಎಚ್ಚರಿಕೆಯಿಂದ ನಡೆದರೆ ಮಾತ್ರ ಈ ದುರಂತದಿಂದ ನಾವು ಪಾರಾಗಬಹುದು. ಮನುಷ್ಯ ಮನುಷ್ಯರ ನಡುವೆ ಪ್ರೀತಿಯು ಮಾತ್ರ ಬೆಸುಗೆ ಹಾಕಬಲ್ಲದು. ನೂರು ವಿಘಟನಕಾರಿ ಬೆಳವಣಿಗೆಗಳು ನಮ್ಮ ನಡುವೆ ಘಟಿಸುತ್ತಿವೆ. ಒಡೆಯುವುದು ಕಷ್ಟವೆಂದು ಒಂದು ಕಾಲದಲ್ಲಿ ತಿಳಿಯಲಾಗುತ್ತಿತ್ತು. ಆದರೆ, ಆಧುನಿಕತೆಯು ತನ್ನ ತುತ್ತತುದಿಯನ್ನು ಮುಟ್ಟಿರುವ, ವೈಜ್ಞಾನಿಕ ಮನೋಧರ್ಮವು ಅನೇಕ ಸಾಂಪ್ರದಾಯಿಕ ಮೂಲಭೂತವಾದಿ ಕಾಯಿಲೆಗಳಿಗೆ ಮದ್ದೆಂದು ತಿಳಿಯಲಾಗಿತ್ತು. ಆದರೆ ಈ ಇಂಥ ವೈಜ್ಞಾನಿಕ ಯುಗದಲ್ಲಿಯೇ ಮನುಕುಲವು ಹಿಂದೆಂದೂ ಒಡೆಯದಷ್ಟು ಚೂರು ಚೂರಾಗಿ ಹೋಗಿದೆ. ಇಂಥ ಚೂರುಗಳನ್ನು ಒಂದಾಗಿಸುವ ಹೊಣೆಯನ್ನು ಎಲ್ಲರೂ ಹೊರಬೇಕು. ಇದು ಕ್ರಿಸ್ತನೊಬ್ಬ ಹೊರಬೇಕಾದ ಶಿಲುಬೆಯಲ್ಲ. ಎಲ್ಲರೂ ಹೊರಬೇಕಾದ ಶಿಲುಬೆ.

ಕನ್ನಡದ ಎರಡು ಮಹತ್ವದ ವ್ಯಕ್ತಿತ್ವಗಳು ನಮ್ಮಿಂದ ದೂರವಾಗಿವೆ. ಕನ್ನಡ ಪ್ರಜ್ಞೆಯನ್ನು ಸದಾ ಕಾವಲಿಟ್ಟಿದ್ದ ಚಂಪಾ ಮತ್ತು 'ವಿಶ್ವಭಾರತಿಗೆ ಕನ್ನಡದಾರತಿ'ಯನ್ನು ಬೆಳಗಿದ ನಾಡೋಜ ಚೆನ್ನವೀರ ಕಣವಿ ಅವರು ತಮ್ಮ ಸಾರ್ಥಕ ಬದುಕುಗಳನ್ನು ಮುಗಿಸಿ, ಇತಿಹಾಸದಲ್ಲಿ ತಮ್ಮ ಹೆಸರನ್ನು ಅಚ್ಚಳಿಯದೆ ಉಳಿಸಿ, ಕಾಣದೂರಿಗೆ ಹೊರಟಿದ್ದಾರೆ. ಇವರಿಗೆ ನಮ್ಮ ಪ್ರೀತಿ ಮತ್ತು ಕೃತಜ್ಞತೆ.

ಶರಣರು ಕಟ್ಟಿದ ಜೀವನ ಮೀಮಾಂಸೆಯೇ ಕಾಯಕದ್ದು. ಕಾಯಕವು ಅವರಿಗೆ ಜೀವನೋಪಾಯಮಾರ್ಗ ಮಾತ್ರವಲ್ಲ. ಅದು ಸೌಂದರ್ಯ ಮೀಮಾಂಸೆಯೂ ಹೌದು. ಅದು ತಾನು ನಂಬಿದ ಇಷ್ಟದೈವದೊಂದಿಗೆ ಕಟ್ಟಿಕೊಳ್ಳುವ ಜೀವಕೊರಳ ಸತ್ಯವೂ ಹೌದು. ಈ ಬಾರಿಯ ಮುಖಪುಟವು ಕಾಯಕದ ಶ್ರದ್ಧೆ, ಶಿಸ್ತು ಮತ್ತು ಸೌಂದರ್ಯಗಳನ್ನು ಪ್ರತಿನಿಧಿಸುತ್ತಿದೆ. ಈ ಮುಖಪುಟವನ್ನು ಮಾಡಿಕೊಟ್ಟ ಶ್ರೀ ಮುರಳೀಧರ ವಿ. ರಾಠೋಡ ಅವರಿಗೆ ಧನ್ಯವಾದಗಳು.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿ ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

**ಡಾ.ಎಂ.ಎಸ್. ಆಶಾದೇವಿ**





**ಗೊರುಚ ಉವಾಚ**

## ವಚನ ಸಾಹಿತ್ಯ ವಿದ್ವಾಂಸರಲ್ಲಿ ವಿನಂತಿ

ಹನ್ನೆರಡನೆಯ ಶತಮಾನದ ವಚನಕಾರ್ತಿ ಅಕ್ಕಮ್ಮನ 'ಇದನರಿಯೆ, ನೀವೆ ಬಲ್ಲಿರಿ' ಎಂಬ ಮಾತಿನಂತೆ, ವಚನ ಸಾಹಿತ್ಯದ ವಿದ್ವಾಂಸರಲ್ಲಿ ಮಾಡಿಕೊಂಡಿರುವ ಒಂದು ಬಿನ್ನಹವಿದು.

ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿರುವ ಸಮಗ್ರ ವಚನ ಸಂಪುಟ–೪(೨೦೦೧, ದ್ವಿತೀಯ ಪರಿಷ್ಕೃತ) ಸಂಕೀರ್ಣ ವಚನಸಂಪುಟ–೯ರಲ್ಲಿ (ಪು.೪೩೯ ರಿಂದ ೪೫೦) ಸಿದ್ಧಮಲ್ಲ ಎಂಬ ವಚನಕಾರನ ೯ ವಚನಗಳಿವೆ. "ಈ ಒಂಬತ್ತು ವಚನಗಳನ್ನು ಬಿಟ್ಟರೆ ಈತನ ವಿಷಯವಾಗಿ ಮತ್ತಾವ ಸಂಗತಿಗಳೂ ದೊರಕುವುದಿಲ್ಲ. 'ಸಿದ್ಧಮಲ್ಲದಾತ ಮೇಲಣ ಗವಿಯ ಗುರುಸಿದ್ಧೇಶ್ವರ ಪ್ರಭುವೆ' ಎಂಬುದು ಈತನ ವಚನಾಂಕಿತ. ಒಂದು ವಚನದಲ್ಲಿ ಪ್ರಭುಲಿಂಗಲೀಲೆಯ (೧೪೩೦) ಉಲ್ಲೇಖ ಬರುವುದರಿಂದ ಈತ ಚಾಮರಸನಿಗಿಂತ ಈಚಿನವನೆನಿಸುತ್ತದೆ. ವಚನಗಳ ವಸ್ತು–ನಿರೂಪಣೆ–ಶೈಲಿಯ ಹಿನ್ನೆಲೆಯಲ್ಲಿ ೧೭ನೆಯ ಶತಮಾನದ ಕೊನೆಯಲ್ಲಿದ್ದನೆಂದು ಊಹಿಸಬಹುದು" ಎಂದು ಈ ಸಂಪುಟದ ಸಂಪಾದಕರಾದ ಡಾ. ವೀರಣ್ಣ ರಾಜೂರ ಅವರು ಹೇಳಿದ್ದಾರೆ. ಹಾಗೆಯೇ, "ವಚನಬಂಧ ಸಡಿಲವಾಗಿದೆ. ವಾಕ್ಯದೋಷಗಳು ಇಣಿಕಿಕ್ಕಿವೆ. ಮುಕ್ತಕಗಳಿಗಿಂತ ಗದ್ಯಲಕ್ಷಣ ಹೊಂದಿದ ವಚನಗಳೇ ಹೆಚ್ಚಾಗಿವೆ" ಎಂದಿದ್ದಾರೆ.

ಸಿದ್ಧಮಲ್ಲನ ವಚನಗಳಲ್ಲಿ ಒಂದನ್ನು ಬಿಟ್ಟರೆ, ಉಳಿದ ೮ ವಚನಗಳೂ ದೀರ್ಘವಾಗೇ ಇವೆ. ಅವುಗಳಲ್ಲಿ "ಕವಿ ಕವಿಗಳೆಂದು ಹೆಸರಿಟ್ಟುಕೊಂಡು ನುಡಿವ ಅಣ್ಣಗಳಿರಾ" ಎಂಬ ಸಾಲಿನಿಂದ ಆರಂಭವಾಗುವ (ಸಂಕೀರ್ಣ ವ.ಸಂ. ೯; ಪುಟ ೪೪೭) ವಚನದಲ್ಲಿ ೬೭ ಸಾಲುಗಳಿವೆ. ಈ ವಚನ ಒಟ್ಟಾರೆಯಾಗಿ ಏನು ಹೇಳುತ್ತದೆ ಎನ್ನುವುದು ತಿಳಿದರೂ, ನಿಮ್ಮ ಅಂಗ ಕಾಯವೆಂಬ ಅಕ್ಷರಕ್ಕೆ 'ವಾ' ಎಂಬ ಒತ್ತುಕೊಟ್ಟು ಎಂಬ ಸಾಲನ್ನು ೨ ಸಲ ಬಳಸಿ, ಪ್ರತಿಯೊಂದು ಸಲಕ್ಕೂ ಹೊಂದಿಸಿ ಕೆಳಗೆ ಕಂಡ ಮಾತುಗಳನ್ನು ಹೇಳುತ್ತಾನೆ:

"ಇಳಿಯ ತೆಗೆದು ಜನ್ಮದಲ್ಲಿ ನುಡಿಸಬಲ್ಲರೆ"
"ಗುಡಿಸಕೊಟ್ಟು, ಗುಡಿಸಿನ ಒಳಗೆ ಸುಳಿದು ಜಿಹ್ವೆಯಲ್ಲಿ ನುಡಿಸಬಲ್ಲರೆ"
"ಕೊಂಬಿನಿಂದಿಳಿಯ ತೆಗೆದು ನುಡಿಸಬಲ್ಲರೆ"
"ಮೇಲೆತ್ವವನು ಕೊಟ್ಟು ಕೆಳಗೈತ್ವವನು ಕೊಟ್ಟು ಇವೆರಡನು ಒಂದ ಮಾಡಿ ನುಡಿಸಬಲ್ಲರೆ"
"ಉತ್ವ ಔತ್ವ ಕೊಟ್ಟು, ಉತ್ವ ಔತ್ವವೆರಡನು ಕೂಡಿ ಒಂದ ಮಾಡಿ ನುಡಿಸಬಲ್ಲರೆ"

೪೦೬, 'ಪ್ರಣಾಮ' ೩ನೇ ಕ್ರಾಸ್,' ಎಫ್ ರಸ್ತೆ, ಐಡಿಯಲ್ ಹೋಮ್ಸ್ ಟೌನ್‌ಶಿಪ್, ೨ನೇ ಹಂತ ರಾಜರಾಜೇಶ್ವರಿ ನಗರ, ಬೆಂಗಳೂರು–೫೬೦ ೦೯೮ ಮೊ : ೯೯೮೦೫೧೨೩೮೯

"ಒಂದು ಸೊನ್ನೆಯ ಕೊಟ್ಟರೆ 'ವಂ' ಎಂದು ಅಂತರಂಗದಲ್ಲಿ ತಿಳಿದು ಜಿಹ್ವೆಯಲ್ಲಿ ನುಡಿಸಬಲ್ಲಡೆ"

"ಎರಡು ಸೊನ್ನೆಯ ಕೊಟ್ಟರೆ 'ವಃ' ಎಂದು ಅಂತರಂಗದಲ್ಲಿ ತಿಳಿದು ಜಿಹ್ವೆಯಲ್ಲಿ ನುಡಿಸಬಲ್ಲರೆ"

ಈ ಮಾತುಗಳಿಗೆ ಮುನ್ನ ಬರುವ "ನಿಮ್ಮ ಅಂಗ ಕಾಯವೆಂಬ ಅಕ್ಷರಕ್ಕೆ 'ವಾ' ಎಂಬ ಒತ್ತುಕೊಟ್ಟು" ಎಂಬ ಸಾಲೂ ಸೇರಿದಂತೆ ಸಾಮಾನ್ಯ ಓದುಗರಿಗೆ ಸ್ಪಷ್ಟವಾಗಿ ಅರ್ಥವಾಗುವುದಿಲ್ಲ.

ಅರಿತವರು ಈ ಸಾಲುಗಳನ್ನು ಅರ್ಥೈಸಬೇಕಾಗಿ ಬಿನ್ನಹ.



ಮಸ್ತಕವ ಮುಟ್ಟಿ ನೋಡಿದಡೆ
ಮನೋಹರದಳಿವು ಕಾಣಬಂದಿತ್ತು!
ಮುಖಮಂಡಲವ ಮುಟ್ಟಿ ನೋಡಿದಡೆ
ಮೂರ್ತಿಯ ಅಳಿವು ಕಾಣಬಂದಿತ್ತು!
ಕೊರಳ ಮುಟ್ಟಿ ನೋಡಿದಡೆ
ಗರಳಧರನ ಇರವು ಕಾಣಬಂದಿತ್ತು!
ತೋಳುಗಳ ಮುಟ್ಟಿ ನೋಡಿದಡೆ
ಶಿವನಪ್ಪುಗೆ ಕಾಣಬಂದಿತ್ತು!
ಉರಸ್ಥಲವ ಮುಟ್ಟಿ ನೋಡಿದಡೆ
ಪರಸ್ಥಲದಂಗಲೇಪ ಕಾಣಬಂದಿತ್ತು
ಬಸಿರ ಮುಟ್ಟಿ ನೋಡಿದಡೆ
ಬ್ರಹ್ಮಾಂಡವ ಕಾಣಬಂದಿತ್ತು!
ಗುಹ್ಯವ ಮುಟ್ಟಿ ನೋಡಿದಡೆ
ಕಾಮದಹನ ಕಾಣಬಂದಿತ್ತು!
ಮಹಾಲಿಂಗ ತ್ರಿಪುರಾಂತಕದೇವಾ
ಮಹಾದೇವಿಯಕ್ಕನ ನಿಲುವನರಿಯದೆ
ಅಳುಪಿ ಕೆಟ್ಟೆನು.

– ಕಿನ್ನರಿ ಬ್ರಹ್ಮಯ್ಯ





## ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪ

ಎಚ್.ಎಸ್. ಸಿದ್ಧಗಂಗಪ್ಪ

ಹರನ ಕರುಣೋದಯದ ತೆರದಲಿ ಬೆಳಗು ತೆರೆಯುವ ಹೊತ್ತಿಗೆ ।
ವೇದಘೋಷದ ದಿವ್ಯ ಲಹರಿಯು ಮನವ ತೊಳೆಯಲು ಮೆಲ್ಲಗೆ ।
ಬರುವ ಶ್ರೀಗುರು ಪಾದುಕೆಯ ದನಿ ಅನುರಣಿತವಾಗಲು ಮೌನಕೆ,
ಸಿದ್ಧಗಂಗೆಯ ನೆಲವೂ ಜಲವೂ ನಮಿಸಿ ನಿಲುವುದು ಸುಮ್ಮಗೆ ॥

ಇಲ್ಲಿ ಇಲ್ಲ ಪವಾಡದದ್ಭುತ ಅಥವ ಉತ್ಸವದಬ್ಬರ ।
ಮುಡಿಯನೆತ್ತಿದೆ ಸರಳ ಸಾಧಾರಣದ ಬದುಕಿನ ಗೋಪುರ ।
ಅದರ ಮೇಲಿದೆ ತ್ಯಾಗಧ್ವಜ ಕೈಬೀಸಿ ಕರೆವುದು ಪಥಿಕರ ।
ಪರಮ ನಿರಪೇಕ್ಷೆಯಲಿ ದಿನವೂ ಸೇವೆಗಾಗಿದೆ ಸರ್ವರ ॥

ಭಿಕ್ಷೆ ಹೊರಟಿದೆ ಜಂಗಮದ ಜೋಳಿಗೆ ಲಕ್ಷ ಜನಗಳ ಪೊರೆದಿದೆ ।
ತೀರ್ಥವಾಗಿದೆ ಭಕ್ತರಿಗೆ ಜೊತೆಗೇ ಸ್ಫೂರ್ತಿಯಾಗಿದೆ ಬುದ್ಧಿಗೆ ।
ಬಂದ ಹಣತೆಗೆ ಎಣ್ಣೆ–ಬತ್ತಿಯ ದೀಪ್ತಿದಾನವ ಮಾಡಿದೆ ।
ರಕ್ಷೆಯಾಗಿದೆ ಮುಗಿಲನೇರಿದ ಎಷ್ಟೋ ರೆಕ್ಕೆಯ ಹಾದಿಗೆ !

ಸದ್ದುಗದ್ದಲವಿರದ ಸಾಧನೆ ಇಲ್ಲಿ ಗದ್ದುಗೆಯೇರಿದೆ ।
ಕಾಯಕವೆ ಕೈಲಾಸವೆನ್ನುವ ಮಾತು ಕೃತಿಯೊಳು ಮೂಡಿದೆ ।
ಕಾವಿಯುಡುಗೆಯನ್ನುಟ್ಟು ನಭವೇ ಕಿರಣಹಸ್ತವ ಚಾಚಿದೆ ।
ಎಲ್ಲ ನನ್ನವರೆನುವ ಭಾವದ ಕರುಣೆಯೇ ಕಣ್ತೆರಿದಿದೆ !

ಶ್ರೀಮಠದ ಹಳೆಯ ವಿದ್ಯಾರ್ಥಿ, ಪೂಜ್ಯರ ಬಗ್ಗೆ ಅಪಾರವಾದ ಭಕ್ತಿ ಗೌರವವನ್ನಿಟ್ಟುಕೊಂಡಿದ್ದ ಸಮನ್ವಯ ಕವಿಯಂದೇ ಕಾವ್ಯಕ್ಷೇತ್ರದಲ್ಲಿ ಚಿರಪರಿತರಾಗಿರುವ ಹಿರಿಯ ವಿದ್ವಾಂಸರು, ವಿಮರ್ಶಕರು, ಚಿಂತಕರೂ, ರಾಷ್ಟ್ರಕವಿಗಳೂ ಆದ ಡಾ. ಜಿ.ಎಸ್. ಶಿವರುದ್ರಪ್ಪನವರು ಪದ್ಮಭೂಷಣ, ಕರ್ನಾಟಕ ರತ್ನ, ತ್ರಿವಿಧ ದಾಸೋಹಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕುರಿತು ಪರಮಪೂಜ್ಯರ ಶಿವವ್ಯಕ್ತಿತ್ವವನ್ನು ಕಾವ್ಯದ

ನಂ. ೧೬೧೭, 'ಮಾತೃಶ್ರೀ', ಸರ್.ಎಂ. ವಿಶ್ವೇಶ್ವರಯ್ಯ ಮುಂದುವರಿದ ಬಡಾವಣೆ, ೬ನೆ ಬ್ಲಾಕ್, ವಿಶ್ವನೀಡಂ ಅಂಚೆ, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು – ೫೬೦ ೦೯೧ ೯೮೪೫೫ ೬೫೮೭೧

ಮೂಲಕ ಅರಳಿಸಿದವರು. ಪರಮಪೂಜ್ಯರನ್ನು ಕುರಿತು ಬರೆದಿರುವ ಈ ಕವನ ಎಷ್ಟು ಅರ್ಥಪೂರ್ಣ, ಎಷ್ಟು ಭಾವಪೂರ್ಣ, ಎಷ್ಟು ಗಂಭೀರ!

ಜನನ : ಜಿ.ಎಸ್.ಎಸ್. ಎಂದೇ ಸಾಹಿತ್ಯ-ಕಾವ್ಯಕ್ಷೇತ್ರದಲ್ಲಿ ಜನಪ್ರಿಯರಾಗಿದ್ದ ಜಿ.ಎಸ್. ಶಿವರುದ್ರಪ್ಪನವರು. ಹುಟ್ಟಿದ್ದು ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನ ಗುಗ್ಗೇರಿ. (ಫೆಬ್ರವರಿ ೭, ೧೯೨೬.) ಹಡೆದ ಪುಣ್ಯಜೀವಿಗಳು ತಂದೆ ಶಾಲಾ ಮಾಸ್ತರರಾಗಿದ್ದ ಶಾಂತವೀರಪ್ಪನವರು. ತಾಯಿ ವೀರಮ್ಮನವರು. ಶಿವರುದ್ರಪ್ಪನವರು ಆರು ವರ್ಷದ ಬಾಲ್ಯದಲ್ಲಿಯೇ ತಾಯಿಯನ್ನು ಕಳೆದುಕೊಂಡ ನತದೃಷ್ಟರು. ತಾಯಿಯ ಪ್ರೀತಿ, ವಾತ್ಸಲ್ಯ, ಮಮತೆಯಿಂದ ವಂಚಿತರಾದವರು. ತಾಯಿಯ ನೆನಪಿನಲ್ಲಿಯೇ ಬಾಲ್ಯವನ್ನು ಕಳೆದರು. ತಂದೆಯೇ ಪ್ರೀತಿಯ ಆರೈಕೆ ಮಾಡುತ್ತಾ ತಾಯಿಯಿಲ್ಲದ ಕೊರಗನ್ನು ನಿವಾರಿಸಲು ಪ್ರಾಮಾಣಿಕ ಪ್ರಯತ್ನ ಮಾಡಿದರು.

ಶಿಕ್ಷಣ : ತಂದೆ ಶಿಕ್ಷಕರಾಗಿದ್ದರಿಂದ ಅನೇಕ ಊರುಗಳಲ್ಲಿ ಕೆಲಸ ಮಾಡುವ ಅನಿವಾರ್ಯತೆ, ಒಂದು ರೀತಿಯಲ್ಲಿ ಅವರದು ಅಲೆಮಾರಿ ಜೀವನ. ಶಿವರುದ್ರಪ್ಪನವರು ಪ್ರಾಥಮಿಕ, ಪ್ರೌಢ ಶಿಕ್ಷಣವನ್ನು ಹೊನ್ನಾಳಿ, ಕೋಟಿಹಾಳ, ವಾಮಗಿರಿ, ಬೆಲಗೂರು, ದಾವಣಗೆರೆಯಲ್ಲಿ ಪಡೆದರು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಅನುಗ್ರಹ, ಆಶೀರ್ವಾದದಿಂದ ಶ್ರೀ ಸಿದ್ಧಗಂಗಾ ಮಠದಲ್ಲಿ ಆಶ್ರಯ ಪಡೆದು ತುಮಕೂರಿನಲ್ಲಿ ಇಂಟರ್‌ಮೀಡಿಯಟ್‌ಗೆ ಸೇರಿಕೊಂಡರು. ಶಾಲಾ ಶಿಕ್ಷಕರ ಮಗನೆಂದರೆ ಕೇಳಬೇಕೆ, ಹಾಸಿ ಹೊದ್ದರೂ ಮಿಕ್ಕಿ ಹಂಚುವಷ್ಟು ಬಡತನ. ಕಲಿಯಬೇಕೆಂಬ ಹಂಬಲ, ತುಡಿತಕ್ಕೆ ಬಡತನ ಅಡ್ಡಿ ಬರದಿದ್ದರೂ, ಕಷ್ಟಪಟ್ಟು ಗಳಿಸಿಯಾದರೂ ಕಲಿಯಬೇಕೆಂಬ ಛಲ.

ಇಂಟರ್‌ಮೀಡಿಯಟ್ ತರಗತಿಗೆ ಸೇರಿದ ವರ್ಷ ೧೯೪೨. ಸ್ವಾತಂತ್ರ್ಯದ ಕಾವು ಏರಿದ್ದ ಸಂದರ್ಭದಲ್ಲಿ ಜಿ.ಎಸ್.ಎಸ್. ಅವರು 'ವಂದೇ ಮಾತರಂ' ಎಂದು ಕೂಗುತ್ತಾ ಮೆರವಣಿಗೆಯಲ್ಲಿ ಭಾಗವಹಿಸುತ್ತಾರೆ. ಮಗನ ವರ್ತನೆಯನ್ನು ಕಂಡು ಸರ್ಕಾರಿ ನೌಕರರಾಗಿದ್ದ ತಂದೆಗೆ ಭಯವಾಗಿ ಮಗನನ್ನು ಬಲವಂತವಾಗಿ ಕಾಲೇಜು ಬಿಡಿಸಿ ತಾವು ಆಗ ಶಿಕ್ಷಕರಾಗಿ ಕೆಲಸ ಮಾಡುತ್ತಿದ್ದ ಕೊರಟಗೆರೆ ತಾಲ್ಲೂಕಿನ ಅಕ್ಕಿರಾಂಪುರಕ್ಕೆ ಕರೆದುಕೊಂಡು ಹೋಗುತ್ತಾರೆ. ಓದುವ ತುಡಿತವಿದ್ದರೂ, ತಂದೆಯ ಇಚ್ಛೆಯ ವಿರುದ್ಧ ಮಾತನಾಡಲು ಮನಸ್ಸಾಗಲಿಲ್ಲ. ಎಲ್ಲಿಯಾದರೂ ಕೆಲಸಕ್ಕೆ ಸೇರಿ ಹಣ ಸಂಪಾದನೆ ಮಾಡಿ ಓದನ್ನು ಮುಂದುವರಿಸಬೇಕೆಂದು ಪ್ರಯತ್ನಪಡುತ್ತಾರೆ. ಕೆಲಸವನ್ನು ಹುಡುಕಿಕೊಂಡು ಹೋದ ಕಡೆಗಳಲ್ಲೆಲ್ಲ ಹುಡುಗ ಇನ್ನೂ ಚಿಕ್ಕವನು ಎಂದು ಕೆಲಸ ಕೊಡಲು ನಿರಾಕರಿಸುತ್ತಾರೆ. ೧೯೪೩ರಲ್ಲಿ ಮತ್ತೆ ತುಮಕೂರಿಗೆ ಬಂದು ಇಂಟರ್‌ಮೀಡಿಯಟ್ ಶಿಕ್ಷಣವನ್ನು ಮುಂದುವರಿಸುತ್ತಾರೆ. ರಜಾ ಸಮಯದಲ್ಲಿ ಸಕಲೇಶಪುರದ ಸ್ಕೂಲ್ ರೇಂಜ್ ಇನ್ಸ್‌ಪೆಕ್ಟರ್ ಕಛೇರಿಯಲ್ಲಿ ಕೆಲಸ ಮಾಡಿ, ಅದರಿಂದ ಬಂದ ಹಣದಲ್ಲಿ ಇಂಟರ್‌ಮೀಡಿಯಟ್ ಶಿಕ್ಷಣ ಮುಗಿಸುತ್ತಾರೆ. ಗುಬ್ಬಿ ತಾಲ್ಲೂಕು ಕಛೇರಿಯಲ್ಲಿ ಗುಮಾಸ್ತರಾಗಿ ಮೂರು ತಿಂಗಳು ಕೆಲಸ ಮಾಡಿದ ಮೇಲೆ, ನಿಟ್ಟೂರಿನ ಆಹಾರಧಾನ್ಯಗಳ





ಡಿಪೋಕ್ಕೆ ರೇಷನ್ ಗುಮಾಸ್ತರಾಗಿ ವರ್ಗವಾಗಿ ಕರ್ತವ್ಯ ನಿರ್ವಹಿಸುತ್ತಾರೆ. ಪ್ರಾಮಾಣಿಕ ದುಡಿಮೆಯಿಂದ ಒಳ್ಳೆಯ ಕೆಲಸಗಾರ ಎಂಬ ಪ್ರಶಂಸೆಗೂ ಪಾತ್ರರಾಗುತ್ತಾರೆ. ಆದರೆ ಬಿಸಿರಕ್ತದ ಯುವಕನ ಪ್ರಾಮಾಣಿಕತೆ ಮೇಲಿನ ಅಧಿಕಾರಿಗಳಿಗೆ ಸಹಿಸಲಾಗಲಿಲ್ಲ. ಅವರು ಒಳಗೊಳಗೆ ಶಿವರುದ್ರಪ್ಪನವರ ಬಗ್ಗೆ ವಿಷ ಕಾರುತ್ತಾರೆ. ಅವರ ಸಿಟ್ಟು ಗುಪ್ತಗಾಮಿನಿಯಾಗಿ ಹರಿಯುತ್ತದೆ. ಒಮ್ಮೆ ಕಾರ್ಯನಿಮಿತ್ತ ರಜೆ ಕೇಳಿದಾಗ ಅವರಲ್ಲಿ ಮನೆ ಮಾಡಿಕೊಂಡಿದ್ದ ಸಿಟ್ಟು ಸ್ಫೋಟಗೊಳ್ಳುತ್ತದೆ. ತರುಣ ಶಿವರುದ್ರಪ್ಪನವರಲ್ಲಿ ಮನೆ ಮಾಡಿಕೊಂಡಿದ್ದ ಶ್ರದ್ಧೆ, ನಿಷ್ಠೆ, ಪ್ರಾಮಾಣಿಕತೆ, ಕೆಲಸದಲ್ಲಿದ್ದ ಬದ್ಧತೆ ಹಿರಿಯ ಅಧಿಕಾರಿಗೆ ಅಪಥ್ಯವೆನಿಸಿ, ರಜೆ ಕೊಡಲು ನಿರಾಕರಿಸಿದಾಗ, ಸ್ವಾಭಿಮಾನಿಯಾದ ಶಿವರುದ್ರಪ್ಪನವರು ಕೆಲಸಕ್ಕೆ ರಾಜಿನಾಮೆ ನೀಡಿ, ತಾವು ಉಳಿಸಿದ್ದ ಹಣವನ್ನು ತೆಗೆದುಕೊಂಡು ಮೈಸೂರಿಗೆ ಹೋಗಿ, ಅಲ್ಲಿನ ಮಹಾರಾಜ ಕಾಲೇಜಿನಲ್ಲಿ ಕನ್ನಡ ಆನರ್ಸ್‌ಗೆ ಸೇರಿಕೊಂಡರು. ಜೀವನಕ್ಕೆ ಆಶ್ರಯವಾಗಿದ್ದ ಕೆಲಸಕ್ಕೆ ರಾಜೀನಾಮೆ ನೀಡಿ ಬಿ.ಎ. ಅನರ್ಸ್‌ಗೆ ಸೇರಿಕೊಂಡಿದ್ದು ತಂದೆಗೆ ಸರಿ ಅನ್ನಿಸಲಿಲ್ಲ. ಅದರೆ ಅವರು ಯೋಚಿಸುವಷ್ಟರಲ್ಲಿ ಕಾಲ ಮಿಂಚಿಹೋಗಿತ್ತು. ಉಳಿದುಕೊಳ್ಳುವುದಕ್ಕೆ ಗೆಳೆಯರು ನೆರವು ನೀಡಿದರೆ, ಹಸಿವನ್ನು ತಣಿಸಲು ಸುತ್ತೂರು ಮಠ ಆಶ್ರಯ ನೀಡಿತು.

ಮಹಾರಾಜ ಕಾಲೇಜಿನ ಪರಿಸರ ಅವರೊಳಗಿನ ಕಾವ್ಯಪ್ರತಿಭೆ ಅರಳಲು ಸೂಕ್ತ ವಾತಾವರಣವನ್ನು ಮೂಡಿಸಿತು. ಅಲ್ಲಿಯೇ ಕಾವ್ಯ ಪ್ರೇಮಕ್ಕೆ ತಮ್ಮದೇ ಆದ ದಿಕ್ಕನ್ನು ಕಂಡುಕೊಂಡರು. ಹಿರಿಯ ವಿದ್ವಾಂಸರಾದ ತ.ಸು. ಶಾಮರಾಯರು, ಎ.ಆರ್. ಕೃಷ್ಣಶಾಸ್ತ್ರಿ, ಕುವೆಂಪು ಅವರ ಶಿಷ್ಯವಾತ್ಸಲ್ಯದಲ್ಲಿ ತಮ್ಮ ಕಾವ್ಯಪ್ರತಿಭೆಯನ್ನು ಅರಳಿಸಿಕೊಂಡರು. "ಕಟ್ಟಿ ಹರಸಿದ್ದೀರಿ ಕನ್ನಡದ ಕಂಕಣವನ್ನು ಕೈಗೆ" ಎನ್ನುವುದು ಗುರುಗಳ ವಾತ್ಸಲ್ಯದ ಬಗ್ಗೆ ಶಿಷ್ಯ ಶಿವರುದ್ರಪ್ಪನವರ ಮನದಾಳದ ಮಾತು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ೧೯೪೯ರಲ್ಲಿ ಬಿ.ಎ. ಅನರ್ಸ್, ೧೯೫೩ರಲ್ಲಿ ಅತ್ಯುತ್ತಮ ದರ್ಜೆಯಲ್ಲಿ ಕನ್ನಡ ಎಂ.ಎ. ಪದವಿಯನ್ನು ಮೂರು ಚಿನ್ನದ ಪದಕಗಳೊಂದಿಗೆ ಪಡೆದರು. ೧೯೬೫ ರಲ್ಲಿ ಕುವೆಂಪು ಅವರ ಮಾರ್ಗದರ್ಶನದಲ್ಲಿ ಅವರು ಬರೆದು ಮಂಡಿಸಿದ 'ಸೌಂದರ್ಯ ಸಮೀಕ್ಷೆ' ಪ್ರೌಢಪ್ರಬಂಧಕ್ಕೆ ಮೈಸೂರು ವಿಶ್ವವಿದ್ಯಾಲಯದಿಂದ ಪಿ.ಎಚ್‌ಡಿ. ಪದವಿ ದೊರೆಯಿತು. ಇದು ಕನ್ನಡದ ಅತ್ಯುತ್ತಮ ಪ್ರೌಢಪ್ರಬಂಧಗಳಲ್ಲೊಂದು ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ತಮ್ಮ ಗುರುಗಳಾದ ಕುವೆಂಪು ಅವರ ಬಗ್ಗೆ ಅಪಾರವಾದ ಪ್ರೀತಿ, ಗೌರವವನ್ನಿಟ್ಟುಕೊಂಡಿದ್ದ ಡಾ. ಶಿವರುದ್ರಪ್ಪನವರು "ಸದ್ದುಗದ್ದಲದ ತುತ್ತೂರಿ ದನಿಗಳಾಚೆಗೆ ನಿಂತು, ನಿಶ್ಶಬ್ದದಲ್ಲಿ ನೆನೆಯುತ್ತೇವೆ ಗೌರವದಿಂದ" ಎಂದು ಕುವೆಂಪು ಅವರನ್ನು ಕುರಿತು ಬರೆದಿರುವ ಕವನ ಗುರುಗಳಿಗೆ ನೀಡಿದ ಕಾವ್ಯ ಗೌರವ. ಕುವೆಂಪುರವರ ವಿಶ್ವಮಾನವ ಸಂದೇಶವನ್ನು, ತಮ್ಮ ಜೀವನದ ಆದರ್ಶವನ್ನಾಗಿಟ್ಟುಕೊಂಡರು. ಹಾಗೆ ನೋಡಿದರೆ ಕುವೆಂಪು ಅವರ ವಿಚಾರಧಾರೆಯ ಮೂರ್ತರೂಪವೇ ಆಗಿದ್ದ ಅವರ

ವ್ಯಕ್ತಿತ್ವ ಕೊನೆಯುಸಿರಿರುವವರೆಗೂ ಗುರುವಿನ ಹಾದಿಯಿಂದ ಆಚೀಚೆ ಸರಿಯಲಿಲ್ಲ. 'ಶಿವೋ ಭೂತ್ವಾ ಶಿವಂ ಯಜೇತ್' ಎನ್ನುವಂತೆ ಕುವೆಂಪುವೇ ಆಗಿ ಕುವೆಂಪುರವರನ್ನು ಆರಾಧಿಸುತ್ತಿದ್ದರು.

ಕುವೆಂಪು ಅವರಂತೆ ಮತ್ತೊಬ್ಬ ಪ್ರೀತಿಯ ಗುರುಗಳು ತ.ಸು. ಶಾಮರಾಯರು.

**ಎದೆ ತುಂಬಿ ಹಾಡಿದೆನು ಅಂದು ನಾನು**
**ಮನವಿಟ್ಟು ಕೇಳಿದಿರಿ ಅಲ್ಲಿ ನೀವು**
**ಇಂದು ನಾ ಹಾಡಿದರು ಅಂದಿನಂತೆಯೆ ಕುಳಿತು**
**ಕೇಳುವಿರಿ ಸಾಕೆನಗೆ ಅದುವೆ ಬಹುಮಾನ**

ಮೇಲಿನ ಜನಪ್ರಿಯ ಕವಿತೆ. ಜಿ.ಎಸ್.ಎಸ್.ರವರಿಗೆ ಮಾತೃ ವಾತ್ಸಲ್ಯವನ್ನು ಧಾರೆಯೆರೆದ ತ.ಸು. ಶಾಮರಾಯರನ್ನು ಕುರಿತು ಬರೆದ ಕವಿತೆ. ಅಷ್ಟೇ ಅಲ್ಲದೆ ಎದೆ ತುಂಬಿ ಹಾಡಿದ್ದನ್ನು ಮನಸ್ಸಿಟ್ಟು ಕೇಳಿದ ಮೊದಲಿಗರು ಈ ಗುರುವೇ ಎನ್ನುವುದು ವಿಶೇಷ. ಅವರು ಈ ಕವನವನ್ನು ತ.ಸು. ಶಾಮರಾಯರ ಮುಂದೆ ಓದಿದಾಗ ತಲ್ಲೀನತೆಯಿಂದ ಆಲಿಸಿ ಮೆಚ್ಚಿ ಪ್ರಶಂಸಿಸಿದರಲ್ಲದೆ ತಮ್ಮ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯ ಮೂಲಕ ಈ ಕವನ ಸಂಕಲನವನ್ನು ಪ್ರಕಟಿಸಿದರು. ಇದು ಜಿ.ಎಸ್.ಎಸ್.ರವರ ಸಾಹಿತ್ಯ ಬದುಕಿಗೆ ದಾರಿದೀಪವಾಯಿತು. ಆ ದೀಪದ ಬೆಳಕಿನಲ್ಲಿ ತಮ್ಮಲ್ಲಿರುವ ಕಾವ್ಯ ಪ್ರತಿಭೆಯನ್ನು ಅರಳಿಸಿಕೊಂಡು ಕಾವ್ಯಕ್ಷೇತ್ರದಲ್ಲಿ ಸದಾ ಹಚ್ಚಹಸಿರಾಗಿರುವಂಥ ಕವನಗಳನ್ನು ರಚಿಸಿ, ಕವನಸಂಕಲನಗಳನ್ನು ಹೊರತಂದು ಸಾಹಿತ್ಯಕ್ಷೇತ್ರವನ್ನು ಶ್ರೀಮಂತಗೊಳಿಸಿದರು.

ವೃತ್ತಿಜೀವನ : ೧೯೪೯ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಎರಡು ಸ್ವರ್ಣ ಪದಕದೊಂದಿಗೆ ಬಿ.ಎ. ಆನರ್ಸ್ ಪದವಿಯನ್ನು ಪಡೆದು ಅದೇ ವರ್ಷ ದಾವಣಗೆರೆ ಡಿ.ಆರ್.ಎಂ. ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿಯನ್ನು ಆರಂಭಿಸಿದರು. ಸೀನಿಯರ್ ಇಂಟರ್ ಮೀಡಿಯಟ್ ವಿದ್ಯಾರ್ಥಿಗಳಿಗೆ ಮೊದಲು ಮಾಡಿದ ಪಾಠ ಕುವೆಂಪುರವರ 'ಚಿತ್ರಾಂಗದಾ' ಕಾವ್ಯ. ಆ ವಿದ್ಯಾರ್ಥಿಗಳಲ್ಲಿ ನಾಡಿನ ಹಿರಿಯ ಸಂಶೋಧಕರೂ, ಘನ ವಿದ್ವಾಂಸರೂ ಆದ ಡಾ. ಎಂ. ಚಿದಾನಂದಮೂರ್ತಿ ಅವರೂ ಒಬ್ಬರು. ಜೆಎಸ್‌ಎಸ್ ತರಗತಿಗೆ ಕಚ್ಚೆ ಪಂಚೆ ಉಟ್ಟು, ಪಂಜಾಬಿ ಸ್ಲಿಪರ್ಸ್ ಹಾಕಿಕೊಂಡು ವುಲ್ಲನ್ ಕೋಟು ಧರಿಸಿಕೊಂಡು ಬರುತ್ತಿದ್ದುದನ್ನು ಅವರು ಶಿಷ್ಯರು ಈಗಲೂ ನೆನಪಿಸಿಕೊಳ್ಳುತ್ತಾರೆ.

೧೯೪೯ ರಿಂದ ೧೯೬೬ ರವರೆಗೆ ಅಂದರೆ ೧೭ ವರ್ಷಗಳ ಕಾಲ ಮೈಸೂರು ಮಹಾರಾಜ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ ಡಾ. ಜಿ.ಎಸ್.ಎಸ್. ರವರು ೧೯೬೩ ರಿಂದ ೧೯೬೬ ರವರಗೆ ಹೈದರಾಬಾದ್ ಉಸ್ಮಾನಿಯಾ ವಿಶ್ವವಿದ್ಯಾಲಯದ ರೀಡರ್, ಕನ್ನಡ ವಿಭಾಗದ ಮುಖ್ಯಸ್ಥರಾಗಿ, ೧೯೬೬ ರಿಂದ ೧೯೭೦ ರವರೆಗೆ ಬೆಂಗಳೂರು





ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ರೀಡರ್ ಆಗಿ ಕಾರ್ಯ ನಿರ್ವಹಿಸಿ ಬಳಿಕ ೧೯೭೦–೮೬ ರವರೆಗೆ ಕನ್ನಡದ ಅಧ್ಯಯನ ಕೇಂದ್ರ ನಿರ್ದೇಶಕರಾಗಿ, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುವಾಗ ಅನೇಕ ಪ್ರಗತಿಪರ, ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸುವುದರ ಮೂಲಕ ಕನ್ನಡ ಚಟುವಟಿಕೆಗಳು ನಿರಂತರವಾಗಿ ನಡೆಯುವಂತೆ ನೋಡಿಕೊಂಡರು.

ಡಾ. ಜಿ.ಎಸ್. ಶಿವರುದ್ರಪ್ಪನವರ ಆಡಳಿತಾವಧಿಯಲ್ಲಿ ನಡೆದ ವಿಚಾರಸಂಕಿರಣಗಳ ವಿಷಯಗಳು ತಮ್ಮ ವೈವಿಧ್ಯಗಳಿಂದ ಗಮನ ಸೆಳೆಯುವಂತಿದ್ದವು. ಗಮನಿಸಬೇಕಾದ ಅಂಶವೆಂದರೆ ಯಾವ ವಿಷಯ–ವಸ್ತುವೂ ಪುನರಾವರ್ತನೆಯಾಗದಂತೆ ಅವರು ಎಚ್ಚರಿಕೆ ವಹಿಸಿದ್ದರು. ಯಾವ ವಿಷಯವನ್ನೂ ಅಪಥ್ಯವೆಂದು ದೂರವಿಡಲಿಲ್ಲ. ಎಲ್ಲವೂ ಮುಕ್ತ. ಹೊಸಗನ್ನಡ, ಹಳೆಗನ್ನಡವೆಂಬ ಭೇದವಿಲ್ಲದೆ ಎಲ್ಲ ಸಾಹಿತ್ಯ ಪ್ರಕಾರಗಳಿಗೂ ಅವಕಾಶ ಕಲ್ಪಿಸಿಕೊಟ್ಟರು. ಎಲ್ಲಾ ವಿಚಾರ ಸಂಕಿರಣಗಳಲ್ಲಿಯೂ ಪೂರ್ವಾಗ್ರಪೀಡಿತರಾಗದೆ ತಲಸ್ಪರ್ಶಿ ಚರ್ಚೆಗಳು ನಡೆಯಲು ಪ್ರೇರಣೆ ನೀಡಿದರು. ಪಂಪ, ರನ್ನ, ಕುಮಾರವ್ಯಾಸ, ಹರಿಹರ, ಬಸವಣ್ಣ, ಕುವೆಂಪು, ಮಾಸ್ತಿ ಮುಂತಾದವರ ಕುರಿತಾಗಿ ವಿಚಾರ ಸಂಕಿರಣಗಳನ್ನು ಆಯೋಜಿಸುವುದರ ಮೂಲಕ ವಿಚಾರಮಂಥನಕ್ಕೆ ವೇದಿಕೆಯನ್ನು ಒದಗಿಸಿಕೊಟ್ಟರು. ಜನಪದ ಸಾಹಿತ್ಯ ಕುರಿತು ಒಂದು ವರ್ಷ ನಡೆದ ವಿಚಾರಸಂಕಿರಣ, ಅಲ್ಲಿ ಮಂಡಿಸಿ ಚರ್ಚಿತವಾದ ವಿಷಯಗಳನ್ನು ಲೇಖನ ರೂಪದಲ್ಲಿ ಪ್ರಕಟಿಸುದುದು ಒಂದು ಅಪೂರ್ವ ಸಾಧನೆ. ಜಿ.ಎಸ್.ಎಸ್. ರವರು ವಿಚಾರ ಸಂಕಿರಣಗಳನ್ನು ನಡೆಸುವುದರ ಜೊತೆಗೆ **"ಸಾಧನೆ"** ಎಂಬ ವಾರ್ಷಿಕ ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು. ಅದು ನಿಜವಾದ ಅರ್ಥದಲ್ಲಿ ಅಕಾಡೆಮಿಕ್ ಚಿಂತನೆಗಳು ಕನ್ನಡ ಸಾಹಿತ್ಯದಲ್ಲಿ ಹುಟ್ಟಿಕೊಳ್ಳಲು ಸಾಧ್ಯವಾಯಿತು. ಅಲ್ಲದೆ ಜನಸಾಮಾನ್ಯರಿಗೆ ಉಪಯುಕ್ತವಾಗುವಂತಹ ಸಾಹಿತ್ಯಚರಿತ್ರೆಯ ಹತ್ತು ಸಂಪುಟಗಳನ್ನು ಪ್ರಕಟಿಸಿದರು. ಇಂದಿಗೂ ಅದು ಅಮೂಲ್ಯ ಆಕರಗ್ರಂಥವಾಗಿದೆ.

ಯು.ಜಿ.ಸಿ. ಯಿಂದ ರಾಷ್ಟ್ರೀಯ ಉಪನ್ಯಾಸಕರಾಗಿ ನಿಯುಕ್ತರಾದ ಡಾ. ಜಿ.ಎಸ್.ಎಸ್. ರವರು ೧೯೮೭–೯೦ ರವರೆಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿ, ನಂತರ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಕುವೆಂಪು ಪೀಠದ ಸಂದರ್ಶಕ ಪ್ರಾಧ್ಯಾಪಕರಾಗಿ, ಕೇಂದ್ರ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ ಕಾರ್ಯ ನಿರ್ವಹಿಸಿ ಆಯಾ ಹುದ್ದೆಗಳಿಗೆ ಘನತೆ, ಗೌರವವನ್ನು ತಂದುಕೊಟ್ಟರು.

ಶ್ರೇಷ್ಠ ಅಧ್ಯಾಪಕರು : ಕನ್ನಡದ ಶ್ರೇಷ್ಠ ಅಧ್ಯಾಪಕರ ಸಾಲಿಗೆ ಸೇರಿದ ಡಾ. ಶಿವರುದ್ರಪ್ಪನವರು ತಮ್ಮ ವಿದ್ಯಾರ್ಥಿಗಳಲ್ಲಿ ಪ್ರಶ್ನೆಯ ಬೀಜವನ್ನು ಬಿತ್ತಿ ಸಮೃದ್ಧವಾದ ಬೆಳೆಯನ್ನು ಬೆಳೆದರು. ಕನ್ನಡ ಸಾಹಿತ್ಯಕ್ಕೆ ಮಹತ್ವದ ಹಾಗೂ ಮೌಲ್ಯಯುತ ಕೊಡುಗೆ ನೀಡಿದ ಲೇಖಕರ ಪಡೆಯನ್ನೇ ನಿರ್ಮಾಣ ಮಾಡಿದರು. ಸಮಕಾಲೀನ ಕನ್ನಡ ಸಾಹಿತ್ಯದ

ಅನೇಕ ಚಳವಳಿಗಳು, ಚರ್ಚೆ, ವಾದವಿವಾದಗಳು ಇಲ್ಲಿಂದಲೇ ರೂಪುಗೊಂಡಿದ್ದುದು ಅನ್ನುವುದು ಕೂಡ ದಾಖಲಾರ್ಹವಾದುದು. ತಾವು ಬೆಳೆಯುವುದರ ಜೊತೆಗೆ ಬೇರೆಯವರನ್ನು ಬೆಳೆಸುವುದರ ಬಗ್ಗೆಯೇ ಚಿಂತಿಸುತ್ತಾ ಬಂದವರು.

**ಕಣ್ಣೀರಿನುಪ್ಪು ಸೋಂಕದ ಸುಖಕೆ**
**ಹಂಬಲಿಸದಿರೋ ಬೆಪ್ಪೆ;**
**ದುಃಖ ಫಲವಿದೆ ಇದೆ ಕೋ ನಿನ್ನೆದುರು ತಟ್ಟೆಯಲಿ**
**ಸುಲಿ, ಸುಖ ಅದರ ಸಿಪ್ಪೆ !**

ಇದು ಕವಿ ಶಿವರುದ್ರಪ್ಪನವರ ಕವನದ ಒಂದು ಚರಣ. ಸುಖ–ದುಃಖಗಳಿಗೆ ನೀಡಿದ ವಿನೂತನ ವ್ಯಾಖ್ಯಾನ.

'ಕಣ್ಣೀರ ಹನಿಯಲ್ಲಿ ಮೊಗದ ನಗೆಯನ್ನು ಕಂಡ, ಜಗದ ಹೃದಯವನ್ನು ಕಂಡ, ವಿವಿಧ ಅನುಭವದ ಸವಿಯನುಂಡ' ಈ ಕವಿ ಮೊದಲು ಹಾಡಿದುದು "ಸಾಮಗಾನ".

ಡಾ. ಜಿ.ಎಸ್.ಎಸ್.ರವರು ಒಬ್ಬ ಸಾಂಸ್ಕೃತಿಕ ನಾಯಕರಾಗಿದ್ದರು. ಅವರು ಸಾಹಿತ್ಯ ಮತ್ತು ಜೀವನ ಒಂದೇ ನಾಣ್ಯದ ಎರಡು ಮುಖಗಳೆಂದು ಭಾವಿಸಿದ್ದರು. ಅವರಿಗೆ ಸಾಹಿತ್ಯಜೀವನ ಪ್ರೀತಿಯ ವಿಸ್ತರಣೆ ಮಾತ್ರವಲ್ಲ ಮಾನವೀಯ ಮೌಲ್ಯಗಳ ಸಂಬಂಧಗಳ ವಿಸ್ತರಣೆ ಕೂಡ. ಇದು ಸಾಹಿತ್ಯವನ್ನು ಕುರಿತಂತೆ ಜಿ.ಎಸ್.ಎಸ್. ಅವರ ನಂಬಿಕೆಯಾಗಿತ್ತು. ತಮ್ಮ ಐವತ್ತು ವರ್ಷಗಳ ಸುದೀರ್ಘ ಸಾಹಿತ್ಯ ಬದುಕಿನುದ್ದಕ್ಕೂ ಈ ನಿಲುವನ್ನು ಸಮಚಿತ್ತ ಮನೋಭಾವದಿಂದ, ಏಕನಿಷ್ಠೆಯಿಂದ ಪ್ರತಿಪಾದಿಸುತ್ತಾ ಬಂದಿದ್ದರು. ತಮ್ಮ ಕವನಗಳಲ್ಲಿ ಮಾನವೀಯ ಸಂಬಂಧಗಳನ್ನು ಹದಗೆಡಿಸುವ ಎಲ್ಲ ಬಗೆಯ ಕುತಂತ್ರಗಳನ್ನು, ಸಣ್ಣತನಗಳನ್ನು ತೀವ್ರವಾಗಿ ವಿರೋಧಿಸುತ್ತಾ ಜೀವನಪ್ರೀತಿಯನ್ನು ಅಭಿವ್ಯಕ್ತಿಗೊಳಿಸುತ್ತಾ ಬಂದರು.

**ಪ್ರೀತಿ ಇಲ್ಲದ ಮೇಲೆ**
**ಮಾತಿಗೆ ಮಾತು ಕೂಡೀತು ಹೇಗೆ !**
**ಅರ್ಥ ಹುಟ್ಟೀತು ಹೇಗೆ !**
**ಬರೀ ಪದಕ್ಕೆ ಪದ ಜೊತೆಗಿದ್ದ ಮಾತ್ರಕ್ಕೆ**
**ಪದ್ಯವಾದೀತು ಹೇಗೆ !**
**ಪ್ರೀತಿ ಇಲ್ಲದ ಮೇಲೆ**
**ಸಂಶಯದ ಗಡಿಗಳುದ್ದಕ್ಕೂ**
**ಸಿಡಿಗುಂಡುಗಳ ಕವನ ನಿಂತೀತು ಹೇಗೆ !**
**ಜಾತಿ–ಮತ–ಭಾಷೆ ಬಣ್ಣಗಳ ಗೋಡೆಯ ನಡುವೆ**
**ನರಳುವ ಪಾಡು ತಪ್ಪೀತು ಹೇಗೆ !**





**ನಮ್ಮ ನಿಮ್ಮ ಮನಸ್ಸು**
**ಮರುಭೂಮಿಯಾಗದ ಹಾಗೆ**
**ತಡೆಗಟ್ಟುವುದು ಹೇಗೆ ?**

"ಪ್ರೀತಿ ಎಂಬ ಮೌಲ್ಯ ಶಿವರುದ್ರಪ್ಪನವರ ಬದುಕನ್ನು ರೂಪಿಸಿರುವ ಜೀವನ. ಶ್ರದ್ಧೆಯೂ ಹೌದು, ಅವರ ಕಾವ್ಯದ ತಾತ್ವಿಕ ನೆಲೆಗಟ್ಟೂ ಹೌದು. ದೇವರು ಧರ್ಮ ವಿಧಿ ಕರ್ಮ ಇತ್ಯಾದಿಗಳ ಬಗ್ಗೆ ತಲೆಕೆಡಿಸಿಕೊಳ್ಳದೆ ವಾಸ್ತವವನ್ನು ಯಥಾವತ್ತಾಗಿ ಒಪ್ಪಿಕೊಳ್ಳುವ, ಗ್ರಹಿಸುವ ಹಾಗೂ ಎದುರಿಸುವ ಧೈರ್ಯವನ್ನು ಮೈಗೂಡಿಸಿಕೊಳ್ಳುವುದು; ಬದುಕಿನ ಅನುಭವಗಳನ್ನು ಶೋಧಿಸುತ್ತ ಅರಿವಿನ ಪರಿಧಿಯನ್ನು ವಿಸ್ತರಿಸುವುದು ಇವೇ ನಿಜವಾದ ಜೀವನಧರ್ಮಗಳೆಂದು ಪರಿಭಾವಿಸಿದ್ದ ಜಿ.ಎಸ್.ಎಸ್.ರವರು ಆ ಹಿನ್ನೆಲೆಯಲ್ಲಿಯೇ ತಮ್ಮ ಕಾವ್ಯದ ಸ್ವರೂಪವನ್ನು ರೂಪಿಸಿಕೊಂಡವರು" ಎಂಬ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರ ಮಾತುಗಳು ಗಮನಾರ್ಹವಾದುದು.

"ಡಾ. ಜಿ.ಎಸ್. ಶಿವರುದ್ರಪ್ಪನವರು ಕೇವಲ ಭಾವುಕ ಕವಿಯಲ್ಲ, ಪ್ರಗತಿಶೀಲ ಕವಿ, ಪ್ರಕೃತಿಪೂಜೆಯ ಕವಿ, ಪ್ರತಿಮೆಗಳ ಕವಿ, ಈ ಯುಗದ ಪ್ರಾತಿನಿಧಿಕ ಕವಿ. ಅವರ ಕವನಗಳಲ್ಲಿ ನವೋದಯವಿದೆ, ನವ್ಯತೆಯಿದೆ; ಸಮನ್ವಯವಿದೆ, ಸಾಹಿತ್ಯಲೋಕದಲ್ಲಿ ಅವರು ಸಮನ್ವಯ ಕವಿಯೆಂದೇ ಪ್ರಖ್ಯಾತಿ. ಆದರೂ ಯಾವ ಪಂಥಕ್ಕೂ ಸೇರದ ಸ್ವತಂತ್ರ ವ್ಯಕ್ತಿ. ಸಹಜತೆ, ಸೌಜನ್ಯಶೀಲತೆ ಅವರ ಕಾವ್ಯದ ವಿಶೇಷ ಲಕ್ಷಣ. ಅವರ ಕಾವ್ಯ ಹೆಸರಿಗಾಗಿ ಕೊಸರಿ ಬಂದ ಉಸಿರಲ್ಲ; ಮಳೆ ಮಣ್ಣಿನ ಸಂಯೋಗದಿಂದ ತೊಳೆದೇಳುವ ಸಹಜ ಹಸಿರು! ಅವರೇ ಹೇಳುವಂತೆ ಅವರ ಕಾವ್ಯರಾಶಿ "ಕಾಲ ಮತ್ತು ಮಾನವ ಇವೆರಡರ ಸಂಬಂಧ ಹಾಗೂ ಸಂಘರ್ಷ, ನಾಗರಿಕ ಬದುಕಿನಲ್ಲಿ ಮನುಷ್ಯ ದಿನದಿಂದ ದಿನಕ್ಕೆ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತಿರುವ ದುರಂತ, ವ್ಯಕ್ತಿ–ವ್ಯಕ್ತಿಗಳ ನಡುವಣ ಸಂಪರ್ಕ ಕಡಿದು ಉಂಟಾಗಿರುವ ಏಕಾಕಿತನದ ವಿಷಾದ – ಈ ಮೂರು ವಸ್ತುಗಳ ಚಿಂತನದ ಫಲ". ಹೃದಯದ ಹೊರೆ ಹಗುರ ಮಾಡಿಕೊಳ್ಳುವುದು, ಕಹಿಯನ್ನು ಸಿಹಿ ಮಾಡಿಕೊಳ್ಳುವುದು ಈ ಕವಿಯ ಕೊಳಲಿನ ಆಶಯ ಎಂಬ ಡಾ. ಗೊ.ರು. ಚನ್ನಬಸಪ್ಪನವರ ಮಾತುಗಳು ಗಮನಾರ್ಹ.

ಸರಳತೆ, ಸಜ್ಜನಿಕೆ, ಸಹೃದಯತೆ, ಶ್ರದ್ಧೆ, ಪ್ರಾಮಾಣಿಕತೆಯನ್ನು ಮೈಗೂಡಿಸಿಕೊಂಡಿದ್ದ ಜಿ.ಎಸ್.ಎಸ್. ರವರು ತಮ್ಮ 'ಹಣತೆ' ಎಂಬ ಕವನದಲ್ಲಿ ತಮ್ಮ ವ್ಯಕ್ತಿತ್ವವನ್ನು ಬಿಂಬಿಸಿದ್ದಾರೆ.

**ಹಣತೆ ಹಚ್ಚುತ್ತೇನೆ ನಾನು,**
**ಈ ಕತ್ತಲನು ಗೆದ್ದು ನಿಲ್ಲುತ್ತೇನೆಂಬ ಜಿದ್ದಿನಿಂದಲ್ಲ**
**ಲೆಕ್ಕವೇ ಇರದ ದೀಪಾವಳಿಯ ಹಡಗುಗಳೆ**
**ಇದರಲ್ಲಿ ಮುಳುಗಿ ಕರಗಿರುವಾಗ**

**ನಾನು ಹಚ್ಚುವ ಹಣತೆ ಶಾಶ್ವತವೆಂಬ**
**ಭ್ರಾಂತಿ ನನಗಿಲ್ಲ.**
**ಆದರೂ ಹಣತೆ ಹಚ್ಚುತ್ತೇನೆ ನಾನು;**
**ಕತ್ತಲೆಯನ್ನು ದಾಟುತ್ತೇನೆಂಬ ಭ್ರಮೆಯಿಂದಲ್ಲ**
**ಇರುವಷ್ಟು ಹೊತ್ತು ನಿನ್ನ ಮುಖ ನಾನು, ನನ್ನ ಮುಖ ನೀನು**
**ನೋಡಬಹುದೆಂಬ ಒಂದೇ ಒಂದು ಆಸೆಯಿಂದ**
**ಹಣತೆ ಆರಿದ ಮೇಲೆ, ನೀನು ಯಾರೋ ಮತ್ತೆ**
**ನಾನು ಯಾರೋ.**

ಈ ಕವನದಲ್ಲಿ ಅವರು ನಡೆದ ಜೀವನದ ದಾರಿಯ ಪರಿಚಯವಾಗುತ್ತದೆ. ಒಂದು ರೀತಿಯಲ್ಲಿ ಅವರ ಬದುಕೇ ಪ್ರತಿಬಿಂಬಿತವಾಗಿದೆ. ಅವರ ಹತ್ತಿರ ಎಂದೂ 'ಅಹಂ' ಸುಳಿಯಲೇ ಇಲ್ಲ. ಸುಳಿಯಲು ಅವರು ಬಿಡಲೂ ಇಲ್ಲ. ನಾನೊಬ್ಬ ಪ್ರಸಿದ್ಧ ಕವಿ, ವಿಮರ್ಶಕ, ನಾನು ಬರೆಯುತ್ತೇನೆ, ಇದೆಲ್ಲ ನನ್ನಿಂದ ಆಯಿತು ಎಂಬುದು ಶಬ್ದರೂಪದಲ್ಲಿ ಮಾತ್ರವಲ್ಲ, ಭಾವರೂಪದಲ್ಲಿಯೂ ಸುಳಿಯಲೇ ಇಲ್ಲ.

ಜಿ.ಎಸ್.ಎಸ್. ಸದಾ ಕರ್ಮಯೋಗಿಯಾಗಿಯೇ ಬದುಕಿ ಇತರರಿಗೆ ಆದರ್ಶವಾದರು. ಅವರ ಬದುಕು ತೆರೆದಿಟ್ಟ ಪುಸ್ತಕದಂತಿತ್ತು. ಅವರು "ಪದ್ಮಪತ್ರಮಿವಾಂಭಸಿ" ಎಂಬಂತೆ ಬದುಕಿದರು. ತಾವರೆಯ ಎಲೆಯ ಮೇಲೆ ನೀರು ಸುರಿದಾಗ ಅದು ಕ್ಷಣಾರ್ಧದಲ್ಲಿಯೇ ಜಾರಿಹೋಗುತ್ತದೆ. ಅ ಎಲೆ ನೀರನ್ನು ಹೀರುವುದೂ ಇಲ್ಲ; ತನ್ನ ಬಳಿ ಅದನ್ನು ಇಟ್ಟುಕೊಳ್ಳುವುದೂ ಇಲ್ಲ. ಆದರೆ ಆ ಎಲೆಯ ಮೇಲೆ ಹಠದಿಂದ ಉಳಿದ ನೀರಿನ ಹನಿಗಳು ಆ ಎಲೆಯ ಸಂಪರ್ಕದಿಂದಲೇ ಮುತ್ತಿನ ಹರಳುಗಳಂತೆ ಹೊಳೆದು ಧನ್ಯತೆಯನ್ನು ಪಡೆಯುತ್ತವೆ. ಆದರಂತೆ ಅವರು ಏನನ್ನು ನನ್ನದು ಎನ್ನಲಿಲ್ಲ, ಯಾವುದನ್ನೂ ನಾನು ಮಾಡಿದ್ದು ಎನ್ನಲಿಲ್ಲ. ಈ ಎಲ್ಲದರ ನಡುವೆ ಅವರಿಂದ ಸೃಷ್ಟಿಯಾದದ್ದು, ಸಾಹಿತ್ಯಲೋಕದ ಅನರ್ಘ್ಯ ಮುತ್ತುಗಳು. ತಾವು ಅಮೂಲ್ಯ ಸಾಹಿತ್ಯವನ್ನು ರಚಿಸುವುದರ ಜೊತೆಗೆ ಹೊಸ ತಲೆಮಾರಿನ ಪ್ರತಿಭೆಗಳಿಗೆ ಸ್ಫೂರ್ತಿಯಾಗಿದ್ದುದು ಅವರ ಪರಿಶುದ್ಧವಾದ ಹೃದಯ ಶ್ರೀಮಂತಿಕೆಯ ದ್ಯೋತಕ.

ಡಾ. ಜಿ.ಎಸ್.ಎಸ್.ರವರು ಹಲವಾರು ಅಧಿಕಾರದ ಸ್ಥಾನಗಳನ್ನು ಹೊಂದಿದ್ದರು. ಸಾಹಿತ್ಯ ಹಾಗೂ ವಿಮರ್ಶೆಯ ಸಂದರ್ಭಗಳು ಮುಕ್ತವಾಗಿ, ಸ್ವತಂತ್ರ್ಯವಾಗಿ ಹಾಗೂ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ, ಆರೋಗ್ಯವಂತ ವಾತಾವರಣವನ್ನು ಉಳಿಸಿಕೊಳ್ಳಬೇಕೆನ್ನುವ ಶ್ರದ್ಧೆ, ತುಡಿತ, ಬದ್ಧತೆಯಿಂದಾಗಿ ಕನ್ನಡ ಸಾಹಿತ್ಯವು ಯಾವುದೇ ಸೋಂಕಿಲ್ಲದಂತೆ ಬೆಳೆಯುವ ಹಾಗೆ ನೋಡಿಕೊಂಡು ಬಂದರು.

ರಾಷ್ಟ್ರಕವಿ ಕುವೆಂಪುರವರು ತಮ್ಮ ಪ್ರೀತಿಯ ಶಿಷ್ಯನ ಬಗ್ಗೆ ಹೇಳಿರುವಂತೆ, ಜಿ.ಎಸ್.





ಶಿವರುದ್ರಪ್ಪನವರು ಕಾವ್ಯ ಮತ್ತು ವಿಮರ್ಶೆಗಳ ಕ್ಷೇತ್ರಗಳಲ್ಲಿ ಕೆಲಸ ಮಾಡಿ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದವರು. "ಮೈಸೂರು ಮಲ್ಲಿಗೆ" ಖ್ಯಾತಿಯ ಕವಿ ಕೆ.ಎಸ್. ನರಸಿಂಹಸ್ವಾಮಿ ಅವರ ಮಾತಿನಲ್ಲಿ ಹೇಳುವುದಾದರೆ 'ಒಳ್ಳೆಯದು ಒಳ್ಳೆಯದನ್ನೇ ಮಾಡುತ್ತದೆ, ತಾನೂ ಬಂಗಾರವಾಗಿ ಬಾಳುತ್ತದೆ'. ಜಿ.ಎಸ್.ಎಸ್. ಅದಕ್ಕೊಂದು ಉತ್ತಮ ನಿದರ್ಶನ.

ಜಿ.ಎಸ್.ಎಸ್. ರವರ ಕವನ ಸಂಕಲನಗಳು : ಸಾಮಗಾನ, ಚೆಲುವು–ಒಲವು, ದೇವಶಿಲ್ಪಿ, ದೀಪದ ಹೆಜ್ಜೆ, ಅನಾವರಣ, ತೆರೆದ ಬಾಗಿಲು, ಗೋಡೆ, ವ್ಯಕ್ತಮಧ್ಯ, ಓರೆ ಅಕ್ಷರಗಳು, ಕಾರ್ತಿಕ, ಕಾಡಿನ ಕತ್ತಲಲ್ಲಿ, ಪ್ರೀತಿ ಇಲ್ಲದ ಮೇಲೆ, ಎದೆ ತುಂಬಿ ಹಾಡಿದೆನು ಹಾಗೂ ಚಕ್ರಗತಿ.

ವಿಮರ್ಶೆ ಗದ್ಯ ಕೃತಿಗಳು : ಪರಿಶೀಲನ, ವಿಮರ್ಶೆಯ ಪೂರ್ವ ಪಶ್ಚಿಮ, ಸೌಂದರ್ಯ ಸಮೀಕ್ಷೆ (ಪಿಎಚ್. ಡಿ. ಮಹಾಪ್ರಬಂಧ), ಕಾವ್ಯಾರ್ಥಚಿಂತನ, ಗತಿಬಿಂಬ, ನವೋದಯ, ಬೆಡಗು, ಅನುರಣನ, ಪ್ರತಿಕ್ರಿಯೆ, ಕನ್ನಡ ಸಾಹಿತ್ಯ ಸಮೀಕ್ಷೆ, ಕುವೆಂಪು–ಪುನರವಲೋಕನ ಮಹಾಕಾವ್ಯ ಸ್ವರೂಪ, ಕನ್ನಡ ಕವಿಗಳು ಕಾವ್ಯ ಕಲ್ಪನೆ, ಹೊಸಗನ್ನಡ ಕವಿಗಳಲ್ಲಿ ಕಾವ್ಯಚಿಂತನೆ, ಸಮಗ್ರ ಗದ್ಯಭಾಷೆ ೧, ೨ ಮತ್ತು ೩, ಶಿವಯೋಗಿ ಸಿದ್ಧರಾಮ, ಸರ್ಪಭೂಷಣ ಶಿವಯೋಗಿ, ಯಾವುದೂ ಸಣ್ಣದಲ್ಲ, ಕಾವ್ಯ ಸಂವಾದ ಹಾಗೂ ಚದುರಿದ ಚಿಂತನೆಗಳು.

ಪ್ರವಾಸಕಥನ : ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ, ಇಂಗ್ಲೆಂಡಿನಲ್ಲಿ ಚತುಮಾರನ, ಅಮೆರಿಕಾದಲ್ಲಿ ಕನ್ನಡಿಗ, ಗಂಗೆಯ ಶಿಖರಗಳಲ್ಲಿ.

ಸಂಪಾದಿತ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಆರು ಸಂಪುಟಗಳು, ಬೆಂಗಳೂರು ವಿ.ವಿ.), ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ (ಹತ್ತು ಸಂಪುಟ, ಬೆಂಗಳೂರು ವಿ.ವಿ.), ಸಾಹಿತ್ಯ ವಾರ್ಷಿಕ (ಹದಿನಾಲ್ಕು ಸಂಪುಟ, ಬೆಂಗಳೂರು ವಿ.ವಿ.).

ಗೌರವ ಪ್ರಶಸ್ತಿಗಳು : ಡಾ. ಜಿ.ಎಸ್. ಶಿವರುದ್ರಪ್ಪನವರು ಎಂದೂ ಕೀರ್ತಿ, ಪ್ರಶಸ್ತಿಗಳಿಗಾಗಿ ಬೆನ್ನು ಹತ್ತಿದವರಲ್ಲ. ತಮ್ಮ ಕೃತಿಗಳಿಗೆ ಪ್ರಶಸ್ತಿ ಬರಲಿ ಎಂದು ಬರೆದವರಲ್ಲ. ಅವರು ಮಾಡಿದ ಸಾಧನೆಗೆ ಕೀರ್ತಿ, ಪ್ರಶಸ್ತಿಗಳು ಹಿಂಬಾಲಿಸಿ ಬಂದವು. ಆದರೆ ಅವೆಲ್ಲವನ್ನೂ ಪ್ರೀತಿಯಿಂದ, ವಿನಮ್ರತೆಯಿಂದ ಸ್ವೀಕರಿಸಿದರು. ಅದೆಷ್ಟೋ ಪ್ರಶಸ್ತಿಗಳು ಬಂದರೂ 'ಪ್ರತಿಷ್ಠೆ', 'ಅಹಂ' ಅವರ ಹತ್ತಿರ ಸುಳಿಯಲಿಲ್ಲ. ನಿರ್ಲಿಪ್ತತೆಯ ಭಾವ. ಅದನ್ನು ಕೊನೆಯವರೆಗೂ ಉಳಿಸಿಕೊಂಡು ಬಂದರು. ಅದು ಅವರಲ್ಲಿ ಮನೆ ಮಾಡಿಕೊಂಡಿದ್ದದು ವಿನಮ್ರತೆಗೆ, ಸಜ್ಜನಿಕೆಗೆ ಹಿಡಿದ ಕನ್ನಡಿ.

'ಮಾಸ್ಕೋದಲ್ಲಿ ೨೨ ದಿನ' ಪ್ರವಾಸಕಥನಕ್ಕೆ ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ (೧೯೭೪), ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪುರಸ್ಕಾರ (೧೯೮೨ ಕರ್ನಾಟಕ ರಾಜ್ಯೋತ್ಸವ ಪುರಸ್ಕಾರ ಹಾಗೂ 'ಕಾವ್ಯಾರ್ಥ ಚಿಂತನ' ಕೃತಿಗೆ ಕೇ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೮೪), ದಾವಣಗೆರೆಯಲ್ಲಿ ನಡೆದ ಅಖಿಲ

೬೧ನೇ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ (೧೯೯೨), ಪ್ರೊ. ಭೂಸನೂರಮಠ ಪ್ರಶಸ್ತಿ ಮತ್ತು ಗೊರೂರು ಪ್ರಶಸ್ತಿ (೧೯೯೭), ಮಾಸ್ತಿ ಪ್ರಶಸ್ತಿ (೨೦೦೦), ಹಂಪಿ ಕನ್ನಡ ವಿವಿಯಿಂದ ನಾಡೋಜ ಗೌರವ ಪ್ರಶಸ್ತಿ (೨೦೦೧), ಮೈಸೂರು ವಿ.ವಿ. ಗೌರವ ಡಿ.ಲಿಟ್ (೨೦೦೪), ರಾಷ್ಟ್ರಕವಿ ಪುರಸ್ಕಾರ, ಅನಕೃ ನಿರ್ಮಾಣ್ ಪ್ರಶಸ್ತಿ (೨೦೦೬), ಬೆಂಗಳೂರು ವಿಶ್ವವಿದ್ಯಾಲಯದಿಂದ ಗೌರವ ಡಿ.ಲಿಟ್, ಕುವೈತ್ ವಿಶ್ವ ಕನ್ನಡ ಸಂಸ್ಕೃತಿ ಸಮ್ಮೇಳನದ ಅಧ್ಯಕ್ಷತೆ (೨೦೦೭), ಸಿದ್ಧಗಂಗಾಶ್ರೀ ಪ್ರಶಸ್ತಿ (೨೦೦೯), ನೃಪತುಂಗ ಪ್ರಶಸ್ತಿ (೨೦೧೦), ಸಾಹಿತ್ಯ ಕಲಾಕೌಸ್ತುಭ ಪ್ರಶಸ್ತಿ (೨೦೧೦), ಮುರುಘಾಮಠದಿಂದ ಬಸವಶ್ರೀ ಪ್ರಶಸ್ತಿ (೨೦೧೩) ಮೊದಲಾದ ಪುರಸ್ಕಾರ ಸಂದಿವೆ.

ಅಭಿನಂದನ ಗ್ರಂಥಗಳು : ಡಾ. ಜಿ.ಎಸ್.ಎಸ್. ರವರು ಶಿಷ್ಯರು, ಸಾಹಿತ್ಯಪ್ರೇಮಿಗಳು, ಅಭಿಮಾನಿಗಳು ಸೇರಿ ಡಾ. ಎಂ. ಚಿದಾನಂದಮೂರ್ತಿಯವರ ನೇತೃತ್ವದಲ್ಲಿ 'ಸ್ನೇಹ ಕಾರ್ತೀಕ' (೧೯೯೭), 'ಹಣತೆ' (೨೦೦೧) ಹಾಗೂ 'ನೆನಪಿನಂಗಳದಲ್ಲಿ ಜಿ.ಎಸ್.ಎಸ್.' (೨೦೧೩), ಗೌರವಗ್ರಂಥಗಳನ್ನು ಪ್ರೀತಿಯಿಂದ ಸಮರ್ಪಣೆ ಮಾಡಿ ಕೃತಜ್ಞತೆಯನ್ನು ಸಲ್ಲಿಸಿದ್ದಾರೆ.

ಕುಟುಂಬ : ಡಾ. ಜಿ.ಎಸ್.ಎಸ್. ಅವರ ಕೈಹಿಡಿದ ಭಾಗ್ಯವಂತೆಯರು ಶ್ರೀಮತಿ ರುದ್ರಾಣಿ ಮತ್ತು ಶ್ರೀಮತಿ ಪದ್ಮಾವತಮ್ಮ. ಅವರಿಗೆ ಇಬ್ಬರು ಪುತ್ರರು ಶ್ರೀ ಜಿ.ಎಸ್. ಜಯದೇವ ಹಾಗೂ ಡಾ. ಜಿ.ಎಸ್. ಶಿವಪ್ರಸಾದ್, ಪುತ್ರಿ ಶ್ರೀಮತಿ ಜಯಂತಿ, ಅವರ ಹೃದಯದಲ್ಲಿ ಪ್ರೀತಿಯ ಹಣತೆಯನ್ನು ಹಚ್ಚಿ, ಸದಾ ಬೆಳಗುವಂತೆ ಮಾಡಿದರು. ಆ ಬೆಳಕಿನಲ್ಲಿ ಸಂತೋಷವನ್ನು ನೆಮ್ಮದಿಯಾಗಿ ಕಂಡುಕೊಂಡರು.

ಶ್ರೀ ಸಿದ್ಧಗಂಗಾ ಮಠದೊಂದಿಗೆ ಆತ್ಮೀಯ ಒಡನಾಟ : ಈ ಹಿಂದೆ ಪ್ರಸ್ತಾಪಿಸಿದಂತೆ ಜಿ.ಎಸ್.ಎಸ್. ನವರು ತುಮಕೂರಿನಲ್ಲಿ ಇಂಟರ್‌ಮೀಡಿಯಟ್ ಓದುತ್ತಿದ್ದಾಗ ಅವರಿಗೆ ಶ್ರೀಮಠ ಆಶ್ರಯ ನೀಡಿತ್ತು. ಆಗ ಮಠದ ಪರಿಸ್ಥಿತಿ ತುಂಬಾ ಕಷ್ಟದಲ್ಲಿತ್ತು. ಅಂತಹ ಪರಿಸ್ಥಿತಿಯಲ್ಲಿಯೂ ನನ್ನಂತಹ ನೂರಾರು ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಹೊಟ್ಟೆಯ ಹಸಿವನ್ನು ನೀಗಿಸುವುದರ ಜೊತೆಗೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ವಿದ್ಯಾರ್ಥಿಗಳ ಬಗ್ಗೆ ಇಟ್ಟುಕೊಂಡಿದ್ದ ಪ್ರೀತಿ, ವಿದ್ಯಾಭ್ಯಾಸದ ಬಗ್ಗೆ ತೋರುತಿದ್ದ ಕಳಕಳಿ, ಮಾರ್ಗದರ್ಶನವನ್ನು ನಾನೆಂದಿಗೂ ಮರೆಯಲಾರೆ ಎಂದು ಮಠದ ಬಗ್ಗೆ, ಸ್ವಾಮೀಜಿಯವರ ಬಗ್ಗೆ ಪ್ರಸ್ತಾಪವಾದಾಗಲೆಲ್ಲ ನೆನಪಿಸಿಕೊಳ್ಳುವುದರ ಮೂಲಕ ಕೃತಜ್ಞತೆ ಅರ್ಪಿಸುತ್ತಿದ್ದರು. ಶ್ರೀಮಠದಲ್ಲಿ ನಡೆದ ಅನೇಕ ಸಮಾರಂಭಗಳಲ್ಲಿ ಭಾಗವಹಿಸಿ, ಪೂಜ್ಯರ ದರ್ಶನ ಪಡೆದು ಪುನೀತರಾಗಿದ್ದರು.

ಪರಮಪೂಜ್ಯ ಶ್ರೀಗಳವರ ಶತಮಾನೋತ್ಸವ ಸಂದರ್ಭದಲ್ಲಿ ಹೊರತಂದ ನೂರ ಹನ್ನೊಂದು ಗ್ರಂಥಗಳ ಪ್ರಧಾನ ಸಂಪಾದಕರಾಗಿದ್ದರು. ಅವರ ನೇತೃತ್ವದಲ್ಲಿ ಸಂಪಾದಕರಲ್ಲಿ





ಒಬ್ಬನಾಗಿ ಸೇವೆ ಸಲ್ಲಿಸುವ ಸೌಭಾಗ್ಯ ನನ್ನದಾಗಿತ್ತು ಎಂದು ಹೇಳಲು ಅಭಿಮಾನವೆನಿಸುತ್ತದೆ. ಗ್ರಂಥ ಸಮಿತಿಯ ಸಂಚಾಲಕರಾಗಿದ್ದ ಪ್ರೊ. ಎಚ್.ವಿ. ವೀರಭದ್ರಯ್ಯ, ಶ್ರೀ ಎಂ. ರೇಣುಕಾರಾಧ್ಯ ಮತ್ತು ಶ್ರೀ ಕೆ.ಎಸ್. ಶಿವರುದ್ರಯ್ಯ ಅವರೊಂದಿಗೆ ನಾನು ಸಹ ಡಾ. ಜಿ.ಎಸ್.ಎಸ್. ಅವರ ಮನೆಗೆ ಅನೇಕ ಸಲ ಹೋಗಿ ಅವರ ಸಲಹೆ, ಸೂಚನೆಗಳು ಹಾಗೂ ಮಾರ್ಗದರ್ಶನವನ್ನು ಪಡೆಯುತ್ತಿದ್ದುದು ನನ್ನ ಜೀವಮಾನದಲ್ಲಿ ಮರೆಯಲಾಗದ ಅಮೃತಘಳಿಗೆ. ಅವರು ಹಿಮಾಲಯಸದೃಶ ವ್ಯಕ್ತಿತ್ವವುಳ್ಳ ವಿದ್ವಾಂಸರು, ಕವಿಗಳು ಆಗಿದ್ದರೂ, ನನ್ನಂತಹ ಕಿರಿಯನನ್ನೂ ಪ್ರೀತಿಯಿಂದ ಕಂಡ ರೀತಿ, ನೀಡಿದ ಅತಿಥ್ಯವನ್ನು ಕಂಡು ಬೆರಗಾಗಿದ್ದೇನೆ. ಹೇಳುವ ವಿಚಾರವನ್ನು, ಸಲಹೆಯನ್ನು ಮೃದುವಾಗಿ ಹೇಳುತ್ತಿದ್ದ ಅವರ ಹೃದಯಶ್ರೀಮಂತಿಕೆ ಅಪಾರವಾದುದು.

ಪರಮಪೂಜ್ಯ ಶ್ರೀ ಶ್ರೀಗಳವರು ಪಟ್ಟಾಧಿಕಾರ ವಹಿಸಿಕೊಂಡು ೮೫ ವರ್ಷಗಳ ಶುಭ ಸಂದರ್ಭದಲ್ಲಿ ನಾಡಿನ ಖ್ಯಾತ ವಿದ್ವಾಂಸರು ಬರೆದ ವಿವಿಧ ಶ್ರೇಷ್ಠ ಸಂತರ ಚಿಂತನೆಗಳನ್ನೊಳಗೊಂಡ 'ಅನುಭಾವ ಪಥ', ಒಂದು ಸಾವಿರ ಪುಟಗಳ ಗ್ರಂಥದ ಪ್ರಧಾನಸಂಪಾದಕರಾಗಿ ಸುಂದರವಾಗಿ ಹೊರಬರಲು ನಮಗೆ ಮಾರ್ಗದರ್ಶನ ನೀಡಿದುದನ್ನು ಇಲ್ಲಿ ಸ್ಮರಿಸಬಯಸುತ್ತೇನೆ. ಗ್ರಂಥದಲ್ಲಿ ಒಂದು ತಪ್ಪೂ ಆಗದಂತೆ ನೋಡಿಕೊಳ್ಳಬೇಕೆಂದು ಅವರು ಮತ್ತೆ ಮತ್ತೆ ಹೇಳುತ್ತಿದ್ದುದರಿಂದ, ಎಚ್ಚರದಿಂದ ಕೆಲಸ ಮಾಡಲು ಸಾಧ್ಯವಾಯಿತು. ಅವರು ತಮ್ಮ ಲೇಖನವನ್ನು ಹಲವಾರು ಬಾರಿ ಕರಡನ್ನು ನೋಡಿ ತಿದ್ದಿಕೊಟ್ಟಿದ್ದನ್ನು ಗಮನಿಸಿದಾಗ ಅವರಲ್ಲಿದ್ದ ಶ್ರದ್ಧೆ, ತಾಳ್ಮೆ, ಯಾವುದೇ ರೀತಿಯ ತಪ್ಪಾಗಬಾರದೆಂಬ ಮುನ್ನೆಚ್ಚರಿಕೆ ನನ್ನಂತಹ ಕಿರಿಯನಿಗೆ ಪಾಠವಾಯಿತು ಎಂಬುದನ್ನು ವಿನೀತಭಾವದಿಂದ ನೆನಪು ಮಾಡಿಕೊಳ್ಳಲು ಬಯಸುತ್ತೇನೆ.

ಅವರು ಸಾಹಿತ್ಯಕ್ಷೇತ್ರಕ್ಕೆ ನೀಡಿದ ಮಹೋನ್ನತ ಕಾಣಿಕೆಯನ್ನು ಮನಗೊಂಡು ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘ ಕೊಡಮಾಡುವ 'ಸಿದ್ಧಗಂಗಾಶ್ರೀ'ಯ ಮೊದಲ ಪ್ರಶಸ್ತಿಯನ್ನು ಫೆಬ್ರವರಿ ೪, ೨೦೦೯ ರಂದು ಶ್ರೀಮಠದಲ್ಲಿ ನಡೆದ ಗುರುವಂದನಾ ಸಮಾರಂಭದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ತಮ್ಮ ಶ್ರೀಹಸ್ತದಿಂದ ನೀಡಿ ಆಶೀರ್ವದಿಸಿದುದು ಒಂದು ಅಪೂರ್ವ ಸನ್ನಿವೇಶ.

ಎಂಬತ್ತೇಳು ವಸಂತಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿದು ದೀಪಗಳನ್ನು ಬೆಳಗಿಸಿದ ಸಾರ್ಥಕ ಜೀವಿ ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರು ಡಿಸೆಂಬರ್ ೨೩, ೨೦೧೩ ರಂದು ಇಹಲೋಕದ ಮಣಿಹವನ್ನು ಮುಗಿಸಿದರು.

ಅವರು ಸಾವಿನಲ್ಲಿಯೂ ವಿಶ್ವಮಾನವರಾಗಿ ತಮ್ಮ ಗುರು ಕುವೆಂಪುರವರ ಮಾರ್ಗದರ್ಶನದಂತೆ ನಡೆದರು. ನಾನು ಯಾವ ಧರ್ಮ, ಜಾತಿ, ಪಂಥಕ್ಕೆ ಸೇರಿದವನಲ್ಲ, ತಮ್ಮ ಅಂತ್ಯಕ್ರಿಯೆ ಯಾವುದೇ ಧಾರ್ಮಿಕ ವಿಧಿಕ್ರಿಯೆಗಳಂತೆ ನಡೆಯದೆ ಪಂಚಭೂತಗಳಲ್ಲಿ

ಒಂದಾಗಬೇಕು ಎಂದು ಬಯಸುವ ಮೂಲಕ ತಾವೂ ಒಬ್ಬ ಜಾತ್ಯತೀತ ವ್ಯಕ್ತಿ ಎಂದು ನಿರೂಪಿಸಿದರು.

ಅವರು ಚಿಂತನೆಗಳು ವಿದ್ವತ್‌ವಲಯವನ್ನು ತಲುಪಿದರೆ, ಭಾವಗೀತೆಗಳು ಜನಸಾಮಾನ್ಯರನ್ನು ಮನವನ್ನು ಅರಳಿಸಿದುವು. ಹೀಗೆ ಸಮಾಜದ ಎಲ್ಲಾ ಸ್ತರವನ್ನು ತಲುಪಿದ ಹೆಗ್ಗಳಿಕೆಯ ಕವಿ. ಶರಣರನ್ನು ಮರಣದಲ್ಲಿ ನೋಡು ಎಂಬ ಸೂಕ್ತಿಯಂತೆ ಜಿ.ಎಸ್.ಎಸ್.ರವರ ಬದುಕು ಮತ್ತು ಬರಹ ಎಷ್ಟು ಮೌಲ್ಯಯುತವಾಗಿತ್ತು ಎನ್ನವುದಕ್ಕೆ ಅವರ ಅಂತಿಮ ದರ್ಶನಕ್ಕೆ ಸಾಗರೋಪಾದಿಯಲ್ಲಿ ಹರಿದುಬಂದ ಜನಸ್ತೋಮವೇ ಸಾಕ್ಷಿಯಾಗಿತ್ತು. ಅವರು ಇಂದು ಇರದಿದ್ದರೂ ಅವರು ರಚಿಸಿರುವ ಸಾಹಿತ್ಯಸಂಪತ್ತು ಜನರ ಹೃದಯಸಿಂಹಾಸನದಲ್ಲಿ ಶಾಶ್ವತವಾಗಿರುತ್ತದೆ.

□

ಎನಗೆ ಗುರುಸ್ಥಲವ ತೋರಿದಾತ ಸಂಗನ ಬಸವಣ್ಣನು
ಎನಗೆ ಲಿಂಗಸ್ಥಲದ ತೋರಿದಾತ ಚನ್ನಬಸವಣ್ಣನು
ಎನಗೆ ಜಂಗಮಸ್ಥಲವ ತೋರಿದಾತ ಸಿದ್ಧರಾಮಯ್ಯನು
ಎನಗೆ ಪ್ರಸಾದಿಸ್ಥಲವ ತೋರಿದಾತ ಬಿಬ್ಬಿಬಾಚಯ್ಯನು?
ಎನಗೆ ಪ್ರಾಣಲಿಂಗಿಸ್ಥಲವ ತೋರಿದಾತ ಚಂದಯ್ಯನು
ಎನಗೆ ಶರಣಸ್ಥಲವ ತೋರಿದಾತ ಸೊಡ್ಡಳ ಬಾಚರಸನು
ಎನಗೆ ಐಕ್ಯಸ್ಥಲವ ತೋರಿದಾತ ಅಜಗಣ್ಣನು
ಎನಗೆ ನಿಜಸ್ಥಲವ ತೋರಿದಾತ ಪ್ರಭುದೇವರು
ಇಂತೀ ಸ್ಥಲಗಳ ಕಂಡು
ಏಳ್ನೂರೆಪ್ಪತ್ತು ಅಮರಗಣಂಗಳ ಶ್ರೀಪಾದಕ್ಕೆ ಶರಣೆಂದು
ಬದುಕಿದೆನು ಕಾಣಾ! ಅಭಿನವ ಮಲ್ಲಿಕಾರ್ಜುನಾ

– ಡೋಹರ ಕಕ್ಕಯ್ಯ





# ಶಾಸನದಲ್ಲಿ ಅಕ್ಕಮಹಾದೇವಿಯ ವಚನಗಳು

## ಚಂದ್ರಶೇಖರ ಕಗ್ಗಲ್ಲುಗೌಡ್ರು

**ಹ**ನ್ನೆರಡನೆ ಶತಮಾನದಲ್ಲಿ ಘಟಿಸಿದ ವಚನ ಆಂದೋಲನ ಸ್ತ್ರೀಯರಿಗೂ ಕೂಡ ಧ್ವನಿ ಎತ್ತುವ ಅವಕಾಶವನ್ನು ನೀಡಿತು. ಅದರ ಪ್ರತಿಫಲವಾಗಿ ಅನೇಕ ಮಹಿಳೆಯರು ಅನುಭವ ಮಂಟಪದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದಲ್ಲದೆ ವಚನಗಳ ರಚನೆಯಲ್ಲೂ ಸಿದ್ಧಹಸ್ತರಾದರು. ಅಕ್ಕಮಹಾದೇವಿಯಂತಹ ಮೇರುಪ್ರತಿಭೆಗಳು ಬೆಳಕಿಗೆ ಬರಲು ಬಸವಾದಿ ಶರಣರು ಕಾರಣೀಭೂತರಾದರು. ಅಕ್ಕನ ವಚನಗಳು ತಾಳೆಗರಿ ಹಸ್ತಪ್ರತಿಗಳಲ್ಲಿ ಮಾತ್ರ ದೊರಕದೆ ಶಿಲಾಶಾಸನಗಳಲ್ಲೂ ದೊರೆತಿರುವುದು ವಚನಾಸಕ್ತರಿಗೆ ಹಾಗೂ ಸಂಶೋಧಕರಿಗೆ ರಸದೂಟವನ್ನು ಬಡಿಸಿದಂತಾಗಿದೆ.

ಗುಬ್ಬಿ ತಾಲ್ಲೂಕು ಕೆಲ್ಲೂರು ಹೋಬಳಿ ಸಂಪಿಗೆ ಗ್ರಾಮದಲ್ಲಿ ಮಲ್ಲಿಕಾರ್ಜುನ ದೇವಸ್ಥಾನದ ಮುಂದೆ ಮೂರು ಶಾಸನಗಳು ಇವೆ. ದೇವಸ್ಥಾನದ ಮುಂದೆ ಇರುವ ತುಂಡು ಶಾಸನ ಕ್ರಿ.ಶ. ೧೨೩೮ ರಲ್ಲಿ ಬರೆಸಿದೆ. ಇದು ೨೬ ಸಾಲುಗಳನ್ನು ಒಳಗೊಂಡಿದ್ದು. ಶಾಸನದ ಸಂಖ್ಯೆ ೩೧. ಅದೇ ದೇವಸ್ಥಾನದ ಮುಂದೆ ನೆಟ್ಟಕಲ್ಲಿನ ಹಿಂಭಾಗದಲ್ಲಿ ಕ್ರಿ.ಶ.೧೩೩೧ರ ಶಾಸನ ೪೬ ಸಾಲುಗಳಲ್ಲಿ ಕೆತ್ತಿದೆ. ಈ ಶಾಸನದ ಸಂಖ್ಯೆ ೩೦. ಕಲ್ಲಿನ ಮುಂಭಾಗದಲ್ಲಿರುವ ಶಾಸನ ಕ್ರಿ.ಶ.೧೩೫೦ ರಲ್ಲಿ ಬರೆದಿದ್ದು ಅದರಲ್ಲಿ ಅಕ್ಕಮಹಾದೇವಿಯ ಮೂರು ವಚನಗಳು ಶಾಸನದ ಆರಂಭದಲ್ಲಿ ಕಂಡುಬರುತ್ತದೆ. ಈ ಶಾಸನವು ೪೬ ಸಾಲುಗಳಿಂದ ಕೂಡಿದೆ. ಶಾಸನದ ಸಂಖ್ಯೆ ೨೯. ಆದರೆ ಶಾಸನದ ಮುಂಭಾಗ ಹಾಗೂ ಹಿಂಭಾಗದ ಶಾಸನದ ಸಾಲುಗಳಿಗೆ ೧ ರಿಂದ ೯೨ ರವರೆಗೆ ಕ್ರಮಸಂಖ್ಯೆ ನೀಡಿದ್ದು, ಒಂದೇ ಶಾಸನ ಎಂದು ತಿಳಿದಿರುವುದು ಕಂಡುಬಂದಿದೆ. ಎರಡು ಶಾಸನವನ್ನು ಒಂದೇ ಕಲ್ಲಿನ ಎರಡು ಬದಿಯಲ್ಲಿ ಬೇರೆ ಬೇರೆ ಕಾಲಘಟ್ಟದಲ್ಲಿ ಬರೆಸಿರುವುದು ಶಾಸನದಲ್ಲಿ ಉಲ್ಲೇಖಿಸಿರುವ ಶಕ ಸಂವತ್ಸರದಿಂದ ತಿಳಿದುಬರುತ್ತದೆ. ಶಾಸನದ ಪಠ್ಯ ಈ ಕೆಳಗಿನಂತೆ ಇದೆ. (ಆಧಾರ: ಎಪಿಗ್ರಫಿಯ ಕರ್ನಾಟಿಕ ತುಮಕೂರು ಜಿಲ್ಲೆಯ ಶಾಸನಗಳು ಸಂಪುಟ ೧೨. ಶಾಸನ ತಜ್ಞ ಬಿ.ಎಲ್.ರೈಸ್ .೧೯೦೪.)

೦೧. ಶ್ರೀ ಕಪುಲೆ ಸಿದ್ಧ ಮಲ್ಲಿಕಾರ್ಜುನ ದೇವರ ಶ್ರೀಪಾದವೇ ಶರಣು. ಕಂದ
೦೨. ನಮಸ್ತುಂಗ ಶಿರಸ್ತುಂಗಂ ಚಂದ್ರ ಚಾಮರಚಾರವೇ ತ್ರಯಿಲೋಕ್ಯಂ ನಗ
೦೩. ರಾರಂಭ ಮೂಲಸ್ತಂಭಾಯ ಶಂಭವೇ. ದಾನನಿಧಾನವಂನ್ತ ಸುಗುಣಂನತನಂ

ಪದವೀಧರ ಪ್ರಾಥಮಿಕ ಶಿಕ್ಷಕ, ಸಂಚಿಯ ಹೊನ್ನಮ್ಮ ಸ್ಮಾರಕ ಬಾಲಕಿಯರ ಸರ್ಕಾರಿ ಪ್ರೌಢಶಾಲೆ
ಕನಕ ಮಂಟಪ ಎದುರು, ಓಲ್ಡ್ ಟೌನ್ ಭದ್ರಾವತಿ ೫೭೭೩೦೧ ಮೊ: ೯೩೪೨೯ ೮೬೯೦೧

೦೪. ಬರುಸತ್ಯನೆಂಬರುಂ ಮಾನವ ಲೋಕಚಲ್ವ .............. ಕೋಮಲ
ಶೀಲದಾಗರಂದೀನನ

೦೫.ಪಾಲಕಂಸಮರ ... ನಿಷ್ಠುರನೆಂಬರುಕ್ರೂರನೆಂಬರುಂ ... ಲನೊಂನ್ದನು ಶ್ರೀಗಿರಿಮಲ್ಲಿ

೦೬.ಕಾರ್ಜುನಾ (೧) ಪಾಪಿದುರಾತ್ಮಕಾನುಭವನಿಮ್ಮಯಪಾದಸರೋಜಯುಗ್ಮದಿಂರೂಪಿಸಿ
ಚಿತ್ತದೊಳ್ನಿಲ್ಸಿ ಭಾವಿ

೦೭. ಸ ಲೊಲ್ಲದೆ ಮಂದ ಬುದ್ಧಿಯಿಂದಾ ಪರದೇ ... ಯೊ ... ಗೆಂನನಿಂ
... ಕುಂಬಿಯೊಳೀವೆನುಸಾನುರಾಗ

೦೮.ದಿಂ ಶ್ರೀಪರಮೇಷ್ಟಿಯಂನನಭಿರಕ್ಷಿಸು ಶ್ರೀಗಿರಿಮಲ್ಲಿಕಾರ್ಜುನಾ (೨). ...
ಬೊಂಬೆಯನೇಣಮಂ ಪಿ

೦೯. ಡಿದು ಸೂತ್ರಿಕನಾಡಿಸುವಂತೆ ಯಾಡುತಾ ಬೊಂಬೆಗೆ ಬೇ..ದ ......ಮ ಉಂಟೆ

೧೦. .........ನಿಂಬಿರುಗಾಮಿಸನ್ತತಿ ....ಶಿವನೆಂತಿದು ....ಓನ್ನಗಂಬಿದ. ನಡು. ಯಿಜಸಂ

೧೧.ನುತ ಶ್ರೀಗಿರಿಮಲ್ಲಿಕಾರ್ಜುನಾ (೩) ಶ್ರೀ ಶ್ರೀ ಶ್ರೀ ಹಿಂದಕೆ ಸಮದ ಸಖ ವರುಷ
೧೨೭೨ ನೆಯ ವಿಕ್ರುತು ಸಂ

೧೨. ವತ್ಸರದ ಜೇಷ್ಠ ಬ ೭ ಬುಧವಾರನೆಲೆಗೆರಾ ... ದಂವರಾಯ ......

೧೩. ಸ್ವಸ್ತಿ ಶ್ರೀ ಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ಶ್ರೀ
ವಿರುಪಾಕ್ಷರಾಯ ಮಹಾ

೧೪. ರಾಯರ ಮಹಾಪ್ರಧಾನ ಸಿಂಗಪ್ಪ ದಂಣಾಯ್ಕರು ಸುಖದಿ ಶ್ರೀ ರಾಜ್ಯಂಗೈಉತಿರ

೧೫. ಲಾಗಿ ಅಂತಾ ಭೂಮಿಪತಿರಾಯನ ಕಾಲದಲ್ಲಿ ಸ್ವಸ್ತಿ ಸಮ ಸಮಸ್ತ ಪ್ರಸಸ್ತಿ ಸ.ಗಿ..ಗೆ

೧೬. .ಯಲ್ಲಿ ಕಟ್ಟಿದಂತಾ ... ಪಟ್ಟಣ ಸಂಪಕೆಯಪುರದ ..... ದಂತಾಕ .......

೧೭. ದೇವರ ಶ್ರೀಪಾದ ಪದ್ಮಾರಾಧಕರುಮಪ್ಪ ಶ್ರೀಮನ್ಮಹಾಸಾಮಂತ ....... ನಾಯಕಧರ್ಮ

೧೮. ನು ಆಲೂರ ಭೀಮ ಕೂಡಿದ ನಾಯಕರ ಗಂಡತೊಡರ್ದರಗಾಣಮಾರಾಂತರ

೧೯. ಕೊಲುವ ಅಂಕದ ಪಟವರ್ಧನ ಮಹಾಮನ್ನೆಯ .... ಮ ನಾಯಕರು ಅರ್ದ್ಧಾಂಗಿ
ಪುಂಣ್ಯ

೨೦. ...ಪುಂಣ್ಯಪಯೋಧರೆ ಉಭಯ ಕುಲತಿಲಕ ದಂಮಸಾಗರವೆನಿಸಿದ ... ಕೆಲ

೨೧. ಸಿಯಂಮನವರೂ ಸಿದ್ಧಮಲ್ಲಿಕಾರ್ಜುನ ದೇವರ ಗರ್ಭದಂಕಣದ ಕೆಲಸವನು ...
ಹೊಸ

೨೨. ಲೆ... ಮುಂತಾಗಿ ಯಲವನೂ ಬಿಸಿ ಉಭಯ ಮುಚ್ಚಳವನೂ ......

೨೩. ನು ಕಟ್ಟಿಸಿ ಸುಂಣಗೆಲಸವನು ಮಾಡಿಸಿ ಯಿ ದೇವಾಲ್ಯದ ಮುಂದಣ ಬಾಗಿಲ
ಪಡಸಾಲೆ...

೨೪. ನು ಮಾಡಿಸಿ ಭೋಗಮಂಟಪವನೂ ಕಟ್ಟಿಸಿ ಆ ಸಿದ್ಧಮಲ್ಲಿಕಾರ್ಜುನ ದೇವರ
ಅಂಗರಂಗ ಭೋ





೨೫. ಗ. ಂದು ಪಾತ್ರ ಮೂವತು ಹಾಡುವಿಕೆಯವರು ವೊಬೆಸಿ ಬಾರವಿತ್ತಿ ಅಂತು ಶ್ರೀ
ಜನವೈದನ

೨೬. ದೇವರ ಅಂಗರಂಗ ಭೋಗಕೆ ಕೊಟ್ಟು ಆ ಸಿದ್ಧಮಲ್ಲಿಕಾರ್ಜುನ ದೇವರಿಗೆ ಪೂರ್ವದಲಿ
ಸ

೨೭. ಲು ಗದ್ದೇ ಹಿರಿಯ ಬಯಲಿನಲ್ಲಿ ಮೂವತು ಕೊಳಗ ಅದಕೆ ಬೆದ್ದಲು ಹತ್ತು
ಕೊಳಗದ

೨೮. ಹೊಲನು ಅಕ್ಷರದಲಿ ಆ ಕಲ್ಲರಸಿಯಂಮನೂ ಯೀ ದೇವರಿಗೆ ಸಿಖರ ಪಟಸಾಲೆ

೨೯. ಯನು ಕಟ್ಟಿಸಿ ಆ ಸಿದ್ಧಮಲ್ಲಿಕಾರ್ಜುನ ದೇವರ ಉದಯ ಕಾಲದ ನಯಿವೇದ್ಯಕೆ
ಕೊಟಂತಾ

೩೦. ಕೊಡಗಿ ಹಿರಿಯ ಕೆರೆಯ ಕೆಳಗೆ ಹೊಸ ತೂಬಿನ ಬಯಲಲು ಗದೆ ಖ ೧ ದೀ

೩೧. ಪಕೆ ಬೆದ್ದಲು ಹೊಲ ಖಂ ಅಂತು ಮಲ್ಲಿಕಾರ್ಜುನ ದೇವರ ಧೂಪ ದೀಪ ನೈವೇದ್ಯ

೩೨. ತಾಂಬೂಲ ಸೊಡನಿ ಉಪಚಾರಕೆ ಸಲುವ ಗದ್ದೆ ಖಂ ೨ ೦ ಬೆದ್ದಲು ಖಂ ೩
ಯೀ ಮರಿ

೩೩. ಯಾದೆಯಲ್ಲಿ ಆ ಸಿದ್ಧಮಲ್ಲಿಕಾರ್ಜುನ ದೇವರ ಸಿಖರ ದೇವಾಲ್ಯ ಮುಂದಣ
ಭೋಗ ಮಂಟಪ

೩೪. ವೆಲ್ಲವನೂ ಜೀರ್ನ್ಣೋದ್ದಾರವನೂ ಮಾಡ್ಸಿ ನಿಲ್ಸಿ ಆ ದೇವರಿಗೆ ಪೂರ್ವದ ತೋಟ
ಅಂಕಸಮುದ್ರ

೩೫. ಕೆರೆಯ ಕೆಳಗಣ ಪುಷ್ಪದ ತೋಟ ಅದರೊಳಗೆ ನೂರುಮರದ ಸ್ತಾನ ಯಿಂ

೩೬. ತೀ ಸ್ತಾನ ಮಾನ್ಯ ಪೂರ್ವದ ಧಂಮ್ಮಂಗಳಿಗೆ ಮುಂದೆ ಕಾಲಾನಧೀನದ ಮೇಲೆ
ಆವನಾನೊಬ್ಬ

೩೭. ನೂ ಅಳುಪಿ ತೆಗದಂತಾವರುಗಳೂ ವಾರಣಾಸಿಯಲ್ಲಿಗೆ ಹೋಗಿ ಸಾವಿರ ಕಪುಲೆ

೩೮. ನೂ ಕೊಂದು ಸಿವಬ್ರಾಹ್ಮಣ ವಧೆಯ ಮಾಡಿದ ಪಾಪಕ್ಕೆ ಹೋಹರು ಯಿಂತೀ
ಧಂರ್ಮ್ಮವನೂ ಮಾ

೩೯. ಡಿದಂತಾ ಕಲ್ಲರಸಿಯಂಮನವರ ತಾಯಲ್ಲಿ ಹತ್ತು ತಂದೆಯಲ್ಲಿ ಹಂನೊಂದು
ಯಿಪ್ಪತ್ತೊಂದು

೪೦. ಮಾವಾನ ಬಂಧುಗಳೆಲ್ಲರೂ ಕಪುಲೆ ಸಿದ್ದಮಲ್ಲಿಕಾರ್ಜುನ ದೇವರ ಶ್ರೀಪಾದ ಪದ್ಮ
ಸಂನಿದಿಗಾಗಿ ಮ

೪೧. ರೆವಡೆಯ ಬೇಕೆಂದು ಮಾಡಿದಂತಾ ಧರ್ಮ್ಮವೆಂದು ಸಹಸ್ರವಾಗಿ ಕಲ್ಲರಸಿಯಂಮನ
ಸಂತಾನ

೪೨. ..ರವಾಗಿ . ೦ .ಕಳಸನಾಯಕನೂ ಲಕ್ಷಪತಿ ಕೋಟಿಪತಿಯಾಗ ಬೇಕೆಂದು ತಂಮತಂದೆ

೪೩. .ಗನು .ಯ ..... ದವಾ.....ನಡವರು ಹರಸಿದಾ ...

೪೪. ...ಯಿಂತೀ ಮಲ್ಲಿಕಾರ್ಜುನ ದೇವರ ಸ್ಥಾನಿಕ ಸೋಮಯ್ಯದೇವ ಆತನ ತಂಗೆ ಹೊಂನಿದೇವೆ

೪೫. ಯಿ ಪುಟವೆ ಯೀ ಸಾಸನಮನಾವಂ ....ಸ.... ಬಲ್ಲೆ ಹದಮಲ್ಲನ ಬರಹ. ಹಾಡುವ ಮಹದೇವಿ ತಾಳದ ಮಾಕಜ್ಜಿ ದೇವರ ಬಸವಿಯರು ಯಿಂತೀ ಸಾಸನ ಸಾಮಪ್ತ ಶ್ರೀಶ್ರೀಶ್ರೀಶ್ರೀ.

ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ವಚನಗಳನ್ನು ಈ ಕೆಳಗಿನಂತೆ ಪ್ರತ್ಯೇಕಿಸಿ ಬರೆಯಲಾಗಿದೆ. ಈ ವಚನಗಳು ವಚನ ಸಂಪುಟದಲ್ಲಿ ಪ್ರಕಟಗೊಳ್ಳದೆ ಇರುವುದರಿಂದ ಈ ವಚನಗಳನ್ನು ಅಪ್ರಕಟಿತ ವಚನಗಳೆಂದು ಪರಿಗಣಿಸಬಹುದು.

ದಾನನಿಧಾನವಂನ್ತ ಸುಗುಣಂನತನಂ

ಬರುಸತ್ಯನೆಂಬರುಂ ಮಾನವ ಲೋಕಚಲ್ವ .............. ಕೋಮಲ ಶೀಲದಾಗರಂದೀನನ

ಪಾಲಕಂಸಮರ ... ನಿಷ್ಠುರನೆಂಬರುಕ್ರೂರನೆಂಬರುಂ ... ಲನೊಂನ್ದನು

ಶ್ರೀಗಿರಿಮಲ್ಲಿಕಾರ್ಜುನಾ (೧)

ಪಾಪಿದುರಾತ್ಮಕಾನುಭವ ನಿಮ್ಮಯ ಪಾದ ಸರೋಜಯುಗ್ಮದಿಂ ರೂಪಿಸಿ

ಚಿತ್ತದೊಳ್ನಿಲ್ಲಿ ಭಾವಿಸ ಲೊಲ್ಲದೆ ಮಂದ ಬುದ್ಧಿಯಿಂದಾ ಪರದೇ ... ಯೊ ... ಗೆಂನನಿಂ

... ಕುಂಬಿಯೊಳೀವೆನುಸಾನುರಾಗದಿಂ ಶ್ರೀಪರಮೇಷ್ಟಿಯಂನನಭಿರಕ್ಷಿಸು ಶ್ರೀಗಿರಿಮಲ್ಲಿಕಾರ್ಜುನಾ (೨).

... ಬೊಂಬೆಯನೇಣಮಂ ಪಿಡಿದು ಸೂತ್ರಿಕನಾಡಿಸುವಂತೆ ಯಾಡುತಾ ಬೊಂಬೆಗೆ ಬೇ..ದ ......ಮ ಉಂಟೆ.........ನಿಂಬಿರುಗಾಮಿಸನ್ತತಿ ....ಶಿವನೆಂತಿದು ....ಒನ್ಯಗಂಬಿದ. ನಡು. ಯಿಜಸಂನುತ ಶ್ರೀಗಿರಿಮಲ್ಲಿಕಾರ್ಜುನಾ (೩)

ಶ್ರೀ ವಿರೂಪಾಕ್ಷರಾಯ ಮಹಾರಾಯರ ಮಹಾಪ್ರಧಾನ ಸಿಂಗಪ್ಪದಂಣಾಯ್ಕರ ಕಾಲದಲ್ಲಿ ಶಾಸನ ರಚಿಸಲಾಗಿದೆ. ಸಾಮಂತನಾದ ಆಲೂರು ಭೀಮನ ಹೆಸರು ಶಾಸನದಲ್ಲಿ ಬರೆದಿದೆ. ಶಾಸನ ಅಲ್ಲಲ್ಲಿ ತುಟಿತವಾಗಿದೆ. ಇದರಿಂದಾಗಿ ವಚನದ ಭಾವವನ್ನು ಅರ್ಥಮಾಡಿಕೊಳ್ಳುವುದು ಕಷ್ಟಸಾಧ್ಯ. ಇದು ಮಲ್ಲಿಕಾರ್ಜುನದೇವರಿಗೆ ದಾನ ನೀಡಿದ ಶಾಸನವಾಗಿದ್ದು ಶಾಸನದ ಅಂತ್ಯದಲ್ಲಿ ಹದಮಲ್ಲನ ಬರಹ ಎಂದಿದೆ. ಹಾಡುವ ಮಹಾದೇವಿ ಹಾಗೂ ತಾಳದ ಮಾಕಜ್ಜಿಯವರನ್ನು ದೇವರ ಬಸವಿಯರು ಎಂದು ಉಲ್ಲೇಖಿಸಿದೆ. ಇದರ ಅರ್ಥ ಮಾಕಜ್ಜಿಯ ತಾಳಕ್ಕೆ ಮಹಾದೇವಿ ವಚನವನ್ನು ಹಾಡಿದ್ದಾಳೆಂದು ತಿಳಿಯಬಹುದು. ದೇವರ ಬಸವಿಯರು ಕೂಡ ವಚನವನ್ನು ಹಾಡುತ್ತಿದ್ದರೆಂದು, ಜನಸಾಮಾನ್ಯರ ಬಾಳಿನಲ್ಲಿ ವಚನಗಳು ಪ್ರಭಾವ ಬೀರಿದ್ದವು ಎಂಬುದನ್ನು ಈ ಶಾಸನದ ಮೂಲಕ ತಿಳಿದುಕೊಳ್ಳಬಹುದು.







# ದೇಹವೇ ದೇವಾಲಯ

ಡಾ. ವಿ.ಎಚ್. ಮೂಲಿಮನಿ

**ಸಾ**ಮವೇದಕ್ಕೆ ಸೇರಿದ "ಮೈತ್ರೇಯಿ" ಉಪನಿಷತ್ತಿನಲ್ಲಿ ಶಿವನು ಮೈತ್ರೇಯಿ ಋಷಿಗೆ ಆತ್ಮಜ್ಞಾನವನ್ನು ಬೋಧಿಸುವಾಗ ಆರಂಭದಲ್ಲಿ ಹೀಗೆನ್ನುತ್ತಾನೆ.

**ದೇಹೋ ದೇವಾಲಯಃ ಪ್ರೋಕ್ತಃ ಸಜೀವಃ ಕೇವಲೋ ಶಿವಃ ।**

**ತ್ಯಜೇತ್ ಅಜ್ಞಾನನಿರ್ಮಾಲ್ಯಂ ಸೋಹಂಭಾವೇನ ಪೂಜಯೇತ್ ॥**

ಈ ಶರೀರವನ್ನು ದೇವಾಲಯ ಎನ್ನಲಾಗಿದೆ. ಇಲ್ಲಿ ವಾಸಿಸುವ ಜೀವನೇ ಶಿವಸ್ವರೂಪನಾಗಿದ್ದಾನೆ. ಅಜ್ಞಾನವೆಂಬ ನಿರ್ಮಾಲ್ಯವನ್ನು ತ್ಯಜಿಸಿ ಆ ಶಿವಸ್ವರೂಪನೇ ನಾನಾಗಿದ್ದೇನೆ ಎಂಬ ವಾಸ್ತವದ ಪೂಜೆ ನಡೆಯುತ್ತಿರಲಿ.

The great temple is Human body
Built by almighty,
Each cell is God of this temple,
Worship God to get moksha
That is Nature.

ಮನುಷ್ಯನ ಶರೀರವು ಭಗವಂತನಿಂದ ನಿರ್ಮಿತವಾದ ದೊಡ್ಡ ದೇವಾಲಯ. ಪ್ರತಿಯೊಂದು ಅಣುಕೋಶವೂ ದೇವಾಲಯದ ದೇವರು. ಮೋಕ್ಷ ಪಡೆಯಲಿಕ್ಕೆ ದೇವರನ್ನು ಪೂಜಿಸಬೇಕು, ಇದು ಪ್ರಕೃತಿ.

ಪ್ರೋಫೆಸರ್ ಹಕ್ಸ್ಲೆ ಎಂಬ ಪಾಶ್ಚಾತ್ಯ ವಿದ್ವಾಂಸರು ಹೇಳುತ್ತಾರೆ. "ಕಾಳಜಿಯಿಂದಿರು, ನೀನು ದೇವರಿರುವ ಜೀವಂತ ದೇವಾಲಯ", ("Be careful ; your's is living temple of God".)

ಮಹಾನುಭಾವಿ ಬಸವಣ್ಣನವರು ಈ ದೇಹದ ಕುರಿತು ಎಂಥ ಸುಂದರವಾದ ವಚನ ರಚಿಸಿರುವರು!

**ಉಳ್ಳವರು ಶಿವಾಲಯ ಮಾಡುವರಯ್ಯಾ**

**ನಾನೇನು ಮಾಡಲಿ ಬಡವನಯ್ಯ**

ನಿವೃತ್ತ ಜೀವರಸಾಯನಶಾಸ್ತ್ರ ಪ್ರಾಧ್ಯಾಪಕರು, ಗುಲಬರ್ಗಾ ವಿಶ್ವವಿದ್ಯಾಲಯ, ಸಮೃದ್ಧ ನಿಲಯ, ಸಾಯಿನಗರ, ಮುಧೋಳ, ಬಾಗಲಕೋಟೆ ಜಿಲ್ಲೆ ಮೊ.ನಂ : ೯೫೮೬೩೮೪೪೫೭

**ಎನ್ನ ಕಾಲೇ ಕಂಬ, ದೇಹವೇ ದೇಗುಲ**
**ಶಿರ ಹೊನ್ನ ಕಳಸವಯ್ಯ ಕೂಡಲಸಂಗಮದೇವಾ**
**ಕೇಳಯ್ಯಾ, ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ.**

ದೇಹವು ದೇವಾಲಯವಾದ ಮೇಲೆ ನಮ್ಮೊಳಗೆ ದೇವನಿರುವನೆಂದಾಯಿತು. ನಮ್ಮ ದೇಹವು ಕೆಂಪಾಗಿರಬಹುದು, ಕಪ್ಪಾಗಿರಬಹುದು, ಎತ್ತರವಿರಬಹುದು, ಕಿರಿದಾಗಿರಬಹುದು, ಅದು ಹೇಗೇ ಇರಲಿ 'ದೇಹವೇ ದೇವಾಲಯ' ಎಂಬುದನ್ನು ನಾವು ಮರೆಯಬಾರದು. ದೇವಾಲಯ ಸಣ್ಣದು, ದೊಡ್ಡದಾದರೇನು, ಇದರೊಳಗೆ ದೇವನಿರುವುದು ದೊಡ್ಡದಲ್ಲವೆ!

ಅಂದರೆ ಕಂಬದಂತೆ ಭಾರ ಹೊರಬೇಕಾದ ನಮ್ಮ ಕಾಲು ಗಟ್ಟಿಮುಟ್ಟಾಗಿರಬೇಕು. ತಂಬಾಕು ಬೀಡಿ ಸೇದಿ ಕಾಲಿಗೆ ರಕ್ತಚಲನೆ ಕಡಿಮೆ ಆಗಿ ಕಾಲು ಕೊಳೆತು ಕತ್ತರಿಸಿಕೊಳ್ಳುವ ಪ್ರಮೇಯ ಬರದಂತೆ ಪ್ರತಿನಿತ್ಯ ಓಡಾಟ, ವಾಯುವಿಹಾರ ಮಾಡಿ ಕಾಲನ್ನು ಗಟ್ಟಿಯಾಗಿಸಿಕೊಳ್ಳಬೇಕು. ಕಾಲು ಓಡಾಡುವಂತೆ ಇರಬೇಕಾದರೆ ಮದ್ಯಪಾನ, ಧೂಮ್ರಪಾನ ಮಾಡಬಾರದು. ದೇಗುಲದಂತೆ ದೇಹ ಶುಚಿಯಾಗಿರಬೇಕಾದರೆ, ಪ್ರತಿನಿತ್ಯ ಸ್ನಾನ ಮಾಡಿ ಚರ್ಮವನ್ನು ಸ್ವಚ್ಛವಾಗಿಟ್ಟುಕೊಳ್ಳಬೇಕು. ಚರ್ಮ ಪಂಚೇದ್ರಿಯಗಳಲ್ಲಿ ಅತ್ಯಂತ ದೊಡ್ಡದು. ಭದ್ರಕೋಟೆಯಂತೆ ಶರೀರವನ್ನು ರಕ್ಷಿಸುವಂತಹದು. ಅದರಲ್ಲಿ ಸ್ವಲ್ಪ ಗಾಯವಾದರೂ ರೋಗಾಣುಗಳು ಶರೀರ ಪ್ರವೇಶಿಸಿ ನಂಜು ಪಸರಿಸುತ್ತದೆ. ರೋಗಾಣುಗಳು ಶರೀರ ಸೇರದಂತೆ ನೋಡಿಕೊಳ್ಳಬೇಕು.

ಇನ್ನು ಶಿರ ಹೊನ್ನ ಕಳಸವಾಗಬೇಕಾದರೆ ಮನಸ್ಸು ಶಾಂತವಾಗಿ ಸದ್ಭಕ್ತಿ, ಸದ್ಭಾವನೆ ಸುವಿಚಾರಗಳಿಂದ ತುಂಬಿರಬೇಕು. ಇದರಿಂದ ಮಾನಸಿಕ ಆರೋಗ್ಯ ಉತ್ತಮಗೊಳ್ಳುತ್ತದೆ. ಆದರೆ ದುರಂತವೆಂದರೆ ಇಂದು ಮಾನಸಿಕ ಒತ್ತಡಗಳಿಂದ ಆಗುವ ಸಾಂಕ್ರಾಮಿಕವಲ್ಲದ ರೋಗಗಳಿಂದ ಹೆಚ್ಚೆಚ್ಚು ಜನ ಸಾಯುತ್ತಿದ್ದಾರೆ. ಇದಕ್ಕೆ 'ಸೈಕೋಸೋಮ್ಯಾಟಿಕ್ ಡಿಸಾರ್ಡರ್' ಅನ್ನುತ್ತಾರೆ.

ಬಸವಾದಿ ಶರಣರು ನಿನ್ನೊಳಗಿರುವ ಚೈತನ್ಯವೇ ದೇವರು ಎನ್ನುತ್ತಾರೆ. ಅಂತಹ ಚೈತನ್ಯ ಇರುವ ಈ ಮಾನವ ದೇಹವೇ ದೇವಾಲಯ ಎನ್ನುತ್ತಾರೆ. ಮಹಾನ್ ಮಾನವತಾವಾದಿ ಬಸವಣ್ಣನವರ ಪ್ರಸಿದ್ಧ ಉಕ್ತಿ ದೇಹವೆಂಬ ದೇಗುಲ. ಚನ್ನಬಸವಣ್ಣ ದೇಹವೆಂಬುದು ಪರಮಾತ್ಮನ ಪ್ರಾಣವಾಯುವಿನ ಜೇನುಗೂಡು ಎಂದು ಹೇಳಿದ್ದಾರೆ. ದೇಹವು ಶಿವನಿರುವ ಅದ್ಭುತ ಪವಿತ್ರ ತಾಣವಾಗಿದೆ. ಅದು ನಿಜವಾದ ದೇವಾಲಯ. ವರಕವಿ ದ.ರಾ. ಬೇಂದ್ರೆಯವರು ಹೇಳುತ್ತಾರೆ. "ದೇಹವೀಣೆಯ ನೀ ಬಾರಿಸು ಪ್ರವೀಣ". ಅವರ ಇನ್ನೊಂದು ವಾಣಿ "ಚೈತನ್ಯದ ಪೂಜೆಯಾಗಬೇಕು. ನಮ್ಮೊಳಗೆ ಚೈತನ್ಯ ಅದ. ಅದಕ್ಕೆ ಭಂಗ ಆಗದಂತೆ ನಡೆಯಬೇಕು. ಚೈತನ್ಯದಿಂದ ಪೂಜೆಗೆ ಸೌಜನ್ಯದ ಹೂಬೇಕು. ಹೀಗೆ ನಮ್ಮ ದೇಹದೇಗುಲದಲ್ಲಿ ಆರೋಗ್ಯವೆಂಬ ನಂದಾದೀಪ ನಿರಂತರ ಬೆಳಗಿದರೆ ಅರ್ಥಪೂರ್ಣ ಜೀವನ."





ಡಾ. ಬಿ.ಕೆ.ಎಸ್ ಅಯ್ಯಂಗಾರ್ ಅವರ ಹೇಳಿಕೆ ಇಲ್ಲಿ ಉಲ್ಲೇಖನಾರ್ಹ: "ದೇಹವೇ ದೇಗುಲ, ಆಸನಗಳೇ ಪ್ರಾರ್ಥನೆ". ಆಲೋಚಿಸಿ ನೋಡಿದರೆ ಈ ನಮ್ಮ ಶರೀರವೆಂಬುದು ನಮಗೆ ನಿಸರ್ಗವಿತ್ತ ಬಹು ಶ್ರೇಷ್ಠ ಕೊಡುಗೆ. ಇದು ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಎಂಬ ಪಂಚಮಹಾಭೂತಗಳಿಂದ ರಚಿತವಾದ ದಿವ್ಯಾದ್ಭುತ ಯಂತ್ರ. ಶರಣರ ವಾಣಿ :

**ದೇಹವೆಂಬ ದೇವಾಲಯದಲ್ಲಿ**
**ಪ್ರಾಣವೆಂಬ ದೇವರನಿಟ್ಟು**
**ಮನಸ್ಸೆಂಬ ಪೂಜಾರಿಯಿಂದ**
**ಪೂಜಿಸಿರಣ್ಣಾ ಪೂಜಿಸಿರಣ್ಣಾ ಪೂಜಿಸಿರಣ್ಣಾ**
**ಇದೇ ಜ್ಞಾನೋದಯ ಮಾರ್ಗವಣ್ಣಾ**

ಕಡಕೋಳದ ಮಡಿವಾಳಪ್ಪನವರು ಇಲ್ಲಿ ಅಧ್ಯಾತ್ಮದ ತತ್ವಸುಧೆಯನ್ನು ಹರಿಸಿದ್ದಾರೆ. ಸತ್ಯ ಶುದ್ಧವಾದ ವಿಚಾರಗಳನ್ನು ಗಟ್ಟಿಯಾಗಿ ಮಡಿವಾಳಪ್ಪನವರು ಹೇಳಿದ್ದಾರೆ.

**ಎಲಿರೊ ಎಲಿರೊ ಕೆಡವ್ಯಾಡಿರೋ**
**ನಿಮ್ಮೊಡಲೊಳಗೆ ಶಿವನಾ ನೋಡಿರೋ**
**ಕುಲ ಚಲಕ್ಕೆ ಹೊಡೆದಾಡಬೇಡಿರೋ**
**ಮುಂದೆ ನೆಲ ಮಾಡಿಕೊಳ್ಳುವುದು ನೋಡಿರೋ**

ಶಾರೀರಿಕ ಶುದ್ಧಿಯ ಜತೆಗೆ ಮಾನಸಿಕ ಶುದ್ಧಿಯನ್ನು ಮಾಡಿಕೊಳ್ಳುತ್ತಿರಬೇಕು. ಇದೇ ಮಾತನ್ನು ಅಕ್ಕಮಹಾದೇವಿಯವರು ವಚನದಲ್ಲಿ ಸಾರಿ ಹೇಳಿದ್ದಾರೆ.

**ತನು ಕರಗದವರಲ್ಲಿ ಪುಷ್ಪವ**
**ನೊಲ್ಲೆಯಯ್ಯಾ ನೀನು**
**ಮನ ಕರಗದವರಲಿ ಮಜ್ಜನವನೊಲ್ಲೆಯಯ್ಯಾ ನೀನು**
**ಭಾವ ಶುದ್ಧಿ ಇಲ್ಲದವರಲಿ ನೈವೇದ್ಯವನೊಲ್ಲೆಯಯ್ಯ ನೀನು**

ಶರಣರ ವಾಣಿ ಅಲ್ಲಮ ಪ್ರಭು :

**ದೇಹದೊಳಗೆ ದೇವಾಲಯವಿದ್ದು**
**ಮತ್ತೆ ಬೇರೆ ದೇವಾಲಯವೇಕೆ?**
**ಎರಡಕ್ಕೂ ಹೇಳಲಿಲ್ಲವಯ್ಯ**
**ಗುಹೇಶ್ವರಾ ನೀನು ಕಲ್ಲಾದರೆ ನಾನೇಪ್ಪನೇನು?**

ದೇಹವೇ ದೇವಾಲಯ, ಪ್ರಾಣವೇ ದೇವರಾದ ಮೇಲೆ ಬೇರೆ ದೇವಾಲಯ ಬೇಕೆ? ದೇವರೇಕೆ? ದೇಗುಲ ಕಲ್ಲು, ದೇವರೂ ಕಲ್ಲು. ಈ ಕಲ್ಲಿನ ಒಡನಾಟದಿಂದ ಸಾಧಿಸುವದಾದರೂ ಏನು? ಎಂದು ಎಚ್ಚರಿಸಿದ್ದಾರೆ ಅಲ್ಲಮಪ್ರಭು

ವಾಲ್ಟ್ ಮಿಚಮನ್ ಹೇಳುತ್ತಾರೆ: "ಪವಿತ್ರವಾದುದೇನಾದರೂ ಇದ್ದರೆ ಅದು ಮಾನವ ಶರೀರ". ಬಿ.ಕೆ.ಎಸ್ ಅಯ್ಯಂಗಾರ್ ಹೇಳುತ್ತಾರೆ. (If anything is sacred, human body is sacred.) ಮುಂದುವರಿದು ಅವರು ಹೇಳುತ್ತಾರೆ: "ನಮ್ಮ ದೇಹದಿಂದಲೇ ನಾವು ಭಗವತ್‌ಸ್ವರೂಪ, ಅಂದರೆ ದಿವ್ಯಾತ್ಮನೆಂದು ಅರಿಯಲು ಸಾಧ್ಯ".

ಸ್ವಾಮಿ ವಿವೇಕಾನಂದರ ಗುರುವಾಣಿ ಹೀಗೆನ್ನುತ್ತದೆ.

"ನಿನ್ನೊಳಗೆಯೇ ಜೀವಂತ ದೇವರು ಇದ್ದಾನೆ. ಆದರೂ ನೀನು ಪೂಜಾಗೃಹಗಳನ್ನು, ಮಂದಿರಗಳನ್ನು ಕಟ್ಟಿಸುತ್ತಿದ್ದಿ. ಮಾತ್ರವಲ್ಲದೆ ಇನ್ನೆಷ್ಟು ಕಾಲ್ಪನಿಕ, ಅರ್ಥಹೀನ ವಿಷಯಗಳನ್ನು ನಂಬುತ್ತೇವೆ. ಮಾನವ ಶರೀರದೊಳಗಿನ ಜೀವಾತ್ಮನೆಂಬ ಒಬ್ಬನೇ ದೇವನನ್ನು ಪೂಜಿಸಿದರೆ ಸಾಕು."

ಸರ್ವಜ್ಞ ದೇಹವೇ ದೇವಾಲಯ ಎಂದು ಹೇಳಿದ್ದಾನೆ.

**ದೇಹ ದೇವಾಲಯವು, ಜೀವವೇ ಶಿವಲಿಂಗ**
**ಬಾಯ್ಯಂಗಳದು ಭಪಪಂಗೆ ಮುಕ್ತಿ ಸಂ**
**ದೇಹವಿಲ್ಲೆಂದ ಸರ್ವಜ್ಞ**

ದೇಹವನ್ನು ದೇವಾಲಯವೆಂದು ತಿಳಿ. ಅದರಲ್ಲಿರುವ ಜೀವ, ಶಿವಲಿಂಗದಂತೆ. ಬಾಹ್ಯ ಇಂದ್ರಿಯಗಳನ್ನು ನಿಯಂತ್ರಿಸಿ ಶಿವನನ್ನು ಪೂಜಿಸಿದವನಿಗೆ ಮುಕ್ತಿ ಸಂದೇಹವಿಲ್ಲವೆಂದು ಸರ್ವಜ್ಞ ಹೇಳಿದ್ದಾನೆ. ಈ ವಚನದಲ್ಲಿ ದೇಹಾರೋಗ್ಯ ಹಾಗೂ ಭಕ್ತಿ ವಿಶೇಷತೆ, ಮುಕ್ತಿಯ ಮಾರ್ಗ ತಿಳಿಸಿಕೊಟ್ಟಿದ್ದಾನೆ.

**ಕಲ್ಲೊಳಗೆ ಹೊನ್ನುಂಟು ಮರದೊಳಗೆ ಅಗ್ನಿವುಂಟು**
**ಹಾಲೊಳಗೆ ತುಪ್ಪ ಉಂಟು, ಅಂತರ್ಯಾಮಿಯಲ್ಲಿ**
**ಶಿವನಿಹನು ತೋರಬಲ್ಲ ಗುರು ಸುಳಿಹನು**
**ಕೂಡಲ ಸಂಗಮದೇವಾ**

ಕಲ್ಲಿನಲ್ಲಿ ಕನಕವಡಗಿದಂತೆ, ಮರದಲ್ಲಿ ಮಂದಾಗ್ನಿಯಡಗಿದಂತೆ, ಹಾಲೊಳಗೆ ತುಪ್ಪವಡಗಿದಂತೆ, ಮಾನವನ ಮರೆಯಲ್ಲಿ ಮಹಾಘನ ದೇವನಿರವು ಅಡಗಿದೆ. ಆದರೆ ಮರವೆಯ ಮಾನವನಿಗೆ ಇದರ ಅರಿವಿಲ್ಲ. ಅದಕ್ಕೆ ಅರಿವಿನ ಗುರು ಅಗತ್ಯವೆಂದು ಮಹಾಗುರು ಬಸವಣ್ಣನವರು ಅರುಹಿದ್ದಾರೆ. "ಮಾನವದೇಹದಲ್ಲಿ ರಸರೂಪಿಯಾದ ಪರಮಾತ್ಮನನ್ನು ಸೇರಲು ಒಂದು ವ್ಯವಸ್ಥೆಯಿದೆಯಪ್ಪಾ" ಎಂದು ಶ್ರೀರಂಗ ಮಹಾಗುರುಗಳು ಹೇಳುತ್ತಿದ್ದರು. ಪರಮಹಂಸರು ತಮ್ಮ ಭಕ್ತರನ್ನು ಉದ್ದೇಶಿಸಿ ಹೇಳುತ್ತಾರೆ: "ಭಗವಂತನಿದ್ದಾನೆ, ಜಗಜ್ಜನನಿಯೂ ಇದ್ದಾಳೆ. ಗುಡಿ ಮಂದಿರಗಳಲ್ಲಿ ಮಾತ್ರವಲ್ಲ, ನಮ್ಮೆಲ್ಲರ ಹೃನ್ಮನಗಳಲ್ಲಿ ಅವಿರ್ಭಾವವಾಗಿದ್ದಾಳೆ. ಆದರೆ ನಮಗೆ ಅದರ ಅರಿವೇ ಇಲ್ಲ!".





ಪುರಾಣದಲ್ಲಿ ಒಂದು ಒಳ್ಳೆಯ ಕತೆ, ಈ ರೀತಿ ಇರುತ್ತದೆ.

ದೇವರು ಈ ಪೃಥ್ವಿಯನ್ನು ನಿರ್ಮಾಣ ಮಾಡಲು ನಿರ್ಧರಿಸುತ್ತಾನೆ. ಎಲ್ಲ ನಿರ್ಮಾಣ ಮಾಡಿದ ಮೇಲೆ ಅವನಿಗೆ ಹೇಗೆ ನಡೆದಿದೆ ಎಂದು ನೋಡಲು ಬರುತ್ತಾನೆ. ಅವನು ಪೃಥ್ವಿಗೆ ಬಂದು, ತನ್ನನ್ನು ಎಲ್ಲರಿಗೂ ಪರಿಚಯಿಸಿಕೊಂಡು ಹೇಳುತ್ತಾನೆ. ನಾನೇ ಈ ಪೃಥ್ವಿಯನ್ನು ನಿರ್ಮಾಣ ಮಾಡಿರುತ್ತೇನೆ. ನೀವು ಹೇಗೆ ಇದ್ದೀರಿ? ಪೃಥ್ವಿ ಹೇಗೆ ಇದೆ?

ಒಬ್ಬನು ಹೇಳುತ್ತಾನೆ. 'ಪೃಥ್ವಿಯು ನಿಜವಾಗಿ ಉತ್ತಮವಾಗಿದೆ. ಎಲ್ಲವೂ ಚೆಂದಗಾಣಿಸುತ್ತದೆ.' ಆದರೆ ಅವನು ಹೇಳುತ್ತಾನೆ 'ನನ್ನ ಮೂಗು ರಾಜಕುಮಾರನ ಮೂಗಿನ ಹಾಗೆ ಇಲ್ಲ'. ದೇವರು ತನ್ನ ಅನುಯಾಯಿಗೆ ಈ ದೂರ (ದುಃಖ)ವನ್ನು ಬರೆದುಕೊಳ್ಳಲು ಹೇಳುತ್ತಾನೆ. ಆ ಮೇಲೆ ದೇವರು ಮತ್ತೊಬ್ಬರನ್ನು ಭೆಟ್ಟಿಯಾಗುತ್ತಾನೆ. ಒಬ್ಬ ಹೆಣ್ಣುಮಗಳು ಹೇಳುತ್ತಾಳೆ. 'ಈ ಪೃಥ್ವಿಯು ನಿಜವಾಗಿ ಚೆನ್ನಾಗಿದೆ. ಆದರೆ ನನ್ನ ಕೂದಲು ನನಗೆ ಸರಿ ಅನಿಸುವುದಿಲ್ಲ. ಇವು ತುಂಬ ಉದ್ದ ಹಾಗು ನೋಡಲಿಕ್ಕೆ ಇನ್ನೂ ಚೆನ್ನಾಗಿ ಇರಬೇಕು.' ದೇವರು ಇದನ್ನು ತನ್ನ ಡಾಯರಿಯಲ್ಲಿ ಬರೆದುಕೊಳ್ಳುತ್ತಾನೆ. ಈ ರೀತಿ ದೇವರು ಪ್ರತಿಯೊಬ್ಬನನ್ನೂ ಭೆಟ್ಟಿಯಾಗುತ್ತಾನೆ. ಎಲ್ಲರೂ ಜಗತ್ತು ಚೆನ್ನಾಗಿ ಇದೆ, ಆದರೆ ಪ್ರತಿಯೊಬ್ಬರೂ ತಮ್ಮದೇ ಆದ ಬೇಡಿಕೆಗಳನ್ನು ದೇವರ ಮುಂದೆ ಇಡುತ್ತಾರೆ.

ದೇವರು ವಿಚಾರ ಮಾಡುತ್ತಾನೆ. "ಯಾರು ಪ್ರತಿಯೊಂದೂ ಚೆನ್ನಾಗಿ ಇದೆ ಎಂದು ಹೇಳುವುದಿಲ್ಲ". ದೇವರು ಕೆಲವು ಸಮಯದ ಮತ್ತೆ ಪೃಥ್ವಿಗೆ ಹೋಗುತ್ತಾನೆ. ಆಗ ಎಲ್ಲರೂ ತಮ್ಮ ತಮ್ಮ ಇಚ್ಛೆ ಪೂರೈಸಲಿಲ್ಲ ಎಂದು ದೂರು ಹೇಳುತ್ತಾರೆ. ದೇವರಿಗೆ ಬಹಳ ಬೇಜಾರಾಗುತ್ತದೆ. ಇಲ್ಲಿ ಏಕಾಂತತೆ ಇಲ್ಲ. ಎಲ್ಲ ಜನರೂ ತಮ್ಮ ಬೇಡಿಕೆಗಳೊಂದಿಗೆ ದೇವರ ಬೆನ್ನು ಹತ್ತುತ್ತಾರೆ. ಆಗ ದೇವರು ಎಲ್ಲೋ ಒಂದು ಕಡೆ ಅಡಗಿಕೊಳ್ಳಲು ಪ್ರಯತ್ನ ಮಾಡುತ್ತಾನೆ. ದೇವರು ಮೌಂಟ್ ಎವರೆಸ್ಟ್‌ಗೆ ಹೋಗಿ ಅಡಗಿಕೊಳ್ಳುತ್ತಾನೆ. ಆದರೆ ತೇನಸಿಂಗ ಅಲ್ಲಿಗೆ ಬರುತ್ತಾನೆ. ಆಮೇಲೆ ದೇವರ ಚಂದ್ರಲೋಕಕ್ಕೆ ಹೋಗಲು ವಿಚಾರ ಮಾಡುತ್ತಾನೆ. ಚಂದ್ರಲೋಕವೂ ಸುರಕ್ಷಿತ ಸ್ಥಳ ಅಲ್ಲ ಯಾಕೆಂದರೆ ಆಸ್ಟ್ರೋನಾಟ ಬಂದು ಭೆಟ್ಟಿಯಾಗುತ್ತಾನೆ. ಜನರೆಲ್ಲರೂ ಬಹಳ ಬುದ್ಧಿವಂತರು. ಒಬ್ಬ ಮನುಷ್ಯ ಬಂದರೆ, ಎಲ್ಲರೂ ಅವನನ್ನು ಹಿಂಬಾಲಿಸುತ್ತಾರೆ. ದೇವರು ಸಾಕಷ್ಟು ಚಿಂತಿಸಿ ವಿಚಾರಮಾಡುತ್ತಾನೆ. ಅಡಗಿಕೊಳ್ಳಲು ಒಳ್ಳೆಯ ಸ್ಥಳವೆಂದರೆ ಅದೆ ಮನುಷ್ಯನ ಹೃದಯ (Heart). ಹೃದಯದೊಳಗೆ ದೇವರು ಇದ್ದರೂ ಯಾರೂ ಅವನನ್ನು ಅಲ್ಲಿ ಹುಡುಕಾಡುವುದಿಲ್ಲ. ದೇವರು ಮನುಷ್ಯನ ಹೃದಯದಲ್ಲಿ ವಾಸವಾಗಿರುತ್ತಾನೆ. ಮನುಷ್ಯ ಯಾವಾಗಲೂ ಹೊರಗೇ ಹುಡುಕಾಡುತ್ತಾನೆ ವಿನಃ ತನ್ನೊಳಗೆ ತಾನು ಹುಡುಕಾಡುವುದಿಲ್ಲ.

ಶ್ರೀ ರಾಮಕೃಷ್ಣರು ಹೇಳುತ್ತಾರೆ: "ಭಗವಂತ ಎಲ್ಲರ ಹೃದಯದಲ್ಲೂ ಸಾಧು ಅಸಾಧು, ಭಕ್ತ, ಅಭಕ್ತ, ಎಲ್ಲರಲ್ಲೂ ಇದ್ದಾನೆ." ತನ್ನ ನಡೆನುಡಿಗಳನ್ನು ದೇವರಿಗೆ ಅರ್ಪಿಸಿ, ಲೌಕಿಕ

ಬದುಕಿಗಾಗಿ ಏನನ್ನೂ ಬೇಡದೆ ಆತ್ಮೋನ್ನತಿಯನ್ನು ಬಯಸುವ ಭಕ್ತರಲ್ಲಿ ದೇವನು ನೆಲೆಸಿರುತ್ತಾನೆ. ಮಹಾಯೋಗಿ ವೇಮನ ಹೇಳುತ್ತಾರೆ: "ದೇವರು ತನ್ನೊಳಗೆ ಇದ್ದಾನೆ. ಅವನು ಅಮೂರ್ತ. ಅವನು ಮೂರ್ತಿಗಳಲ್ಲಿ ಇಲ್ಲ. ಅವನು ಭಾವಾತೀತ ಬಯಲು, ಮಂದಿರಗಳ ಕತ್ತಲೆ ಕೋಣೆಯಲ್ಲಿ ಅವನಿಲ್ಲ".

**ಹೃದಯದಲ್ಲಿ ಶಿವನು ಇರುವುದನು ಅರಿಯದೆ,**
**ಎರಗಲೇಕೆ ಶಿಲೆಗೆ? ಎತ್ತಿ ಕೈಯ?**
**ಅಂಥ ಕನ್ನಡಿಯನು ಅರಸಿ ನೋಡಿದಂತೆ**
**ವಿಶ್ವದಾಭಿರಾಮ ಕೇಳು ವೇಮ.**

ಸಿದ್ಧರಾಮೇಶ್ವರ ವಚನ :

**ಅಯ್ಯಾ ಮಹಾಭಕ್ತರ ಹೃದಯದಲ್ಲಿ ನೀನಿಪ್ಪೆಯಾಗಿ,**
**ಅವರ ವಚನವನ್ನ ಕರ್ಣದೊಳಗೆ ತುಂಬಲೊಡನೆ**
**ವಿರಕ್ತಿ ಬೇರೆಯಾಗಿ ಭಕ್ತಿ ಮೊಳೆಯಾಗಿ**
**ನಿಮ್ಮ ಶ್ರೀಪಾದದೊಳಗೆನ್ನ ಸುತ್ತುತ್ತ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ**

ಭಕ್ತನು ಹೇಳುತ್ತಾನೆ. "ಅಯ್ಯಾ ಮಲ್ಲಿಕಾರ್ಜುನದೇವಾ, ತೀರ್ಥಕ್ಷೇತ್ರ ಗುಡಿಗುಂಡಾರವನ್ನೆಲ್ಲ ಸುತ್ತಿ ಬಂದೆ. ಆದರೆ ನಿನ್ನ ಶಿಲೆಯ ಮೂರ್ತಿ ನೋಡಿದೆ. ನಿನ್ನ ನಿಜಸ್ವರೂಪವನ್ನು ಕಾಣದೆ ನಿರಾಶೆಯಾಯಿತು. ಭಕ್ತರ ವಚನವನ್ನು ಕೇಳಿದ ಮೇಲೆ, ಓದಿದ ಮೇಲೆ ನಿಜಭಕ್ತರ ಹೃದಯಲ್ಲಿ ನೀನು ನೆಲೆಸಿರುವೆಯೆಂಬುದು ಮನದಟ್ಟಾಗಿ ಆನಂದ ಹೊಂದಿದೆ. ಮನಸ್ಸಿಗೆ ತೃಪ್ತಿಯಾಯಿತು. ವಿರಕ್ತಿಯೆಂಬ ಭೂಮಿ ಹದವಾಯಿತು. ಭಕ್ತಿಯೆಂಬ ಬೀಜ ನನ್ನಲ್ಲಿ ಅಂಕುರಿಸಿತು! ಅಯ್ಯಾ ಪರಶಿವನೆ, ನಿಮ್ಮ ಪಾದದೊಳಗೆನ್ನ ಸುತ್ತಿಕೊಂಡ ಬಳಿಕ ನನಗಾದ ಆನಂದಕ್ಕೆ ಮೇರೆಯಿಲ್ಲ".

ಎಂಥ ಅದ್ಭುತವಾದ ದೇಹವನ್ನು ದೇವರು ನಮಗೆ ಕರುಣಿಸಿದ್ದಾನೆ; ಅದಕ್ಕೆ ನಾವು ದೇವನಿಗೆ ಎಷ್ಟು ಋಣಿಯಾಗಿದ್ದರೂ ಕಡಿಮೆಯೇ! ದೇವನಿರ್ಮಿತವಾದ ಈ ದೇಹವನ್ನು ನಾವು ದೇವಾಲಯದಂತೆ ಗೌರವಿಸಬೇಕು. ಈ ದೇಹದ ಅಂತರಂಗ, ಬಹಿರಂಗವನ್ನೆಲ್ಲ ನಾವು ಅರಿತು, ಅನುಭವಿಸಿ, ಆನಂದಿಸಬೇಕು. ಅದು ಸಾರ್ಥಕ ಜೀವನ.

ಶಿವ ಕೈಲಾಸದಲ್ಲಿ ಕುಳಿತಿಲ್ಲ, ಎಲ್ಲೆಡೆಯಲ್ಲಿಯೂ ಅವನಿದ್ದಾನೆ. ಅವನ ಇಚ್ಛೆಯಂತೆ ಜಗತ್ತು ಚಲಿಸುತ್ತದೆ.

**ಎಲ್ಲವೂ ಶಿವನೆಂದರಲ್ಲೇ ಭಯವಯ್ಯ?**
**ಎಲ್ಲರೂ ಶಿವನ ನೆನೆದರೆ ಕೈಲಾಸ**
**ವಿಲ್ಲಿಯೆ ಇಹುದು ಸರ್ವಜ್ಞ**





ಭಕ್ತಿ ಎಲ್ಲೆಡೆಯಲ್ಲಿಯೂ ಶಿವನನ್ನು ಕಂಡರೆ ಭಯವಲ್ಲದೆ? ಲೋಕವೆಲ್ಲ ಶಿವನನ್ನು ಧ್ಯಾನಿಸಿದರೆ ಈ ಲೋಕವೇ ಕೈಲಾಸವಾಗುವುದು.

**ಮನದಲ್ಲಿ ನೆನಪಿರಲು ತನುವೊಂದು ಮಠವಕ್ಕು**
**ಮನ ಹೋಗಿ ಹಂಸ ನೆನೆದರೆ ಅದು ಹಾಳು**
**ಮನೆಯೆಂದು ತಿಳಿಯೊ ಸರ್ವಜ್ಞ**

ಯಾವಾಗಲೂ ಒಮ್ಮೆ ಶಿವಧ್ಯಾನ, ಶಿವಪೂಜೆ ಮಾಡಿದರೆ ಸಾಲದು. ಶಿವನು ಸದಾ ಮನಸ್ಸಿನಲ್ಲೇ ನೆಲೆಸಿರಬೇಕು. ಆಗ ಮನಸ್ಸು ಪವಿತ್ರವಾಗುತ್ತದೆ. ಶಿವನ ಧ್ಯಾನವನ್ನು ಬಿಟ್ಟು ಹಲವು ಹನ್ನೊಂದನ್ನು ನೆನೆಯುತ್ತಾ ಕುಳಿತರೆ ಮನವೇ ಹಾಳುಮನೆಯಾಗುತ್ತದೆ.

**ಆನೆ ಕನ್ನಡಿಯಲ್ಲಿ ತಾನಡಗಿ ಇಪ್ಪಂತೆ**
**ಜ್ಞಾನವುಳ್ಳವರ ಹೃದಯದಲಿ ಪರಶಿವನು**
**ತಾನಡಗಿ ಇರನು ಸರ್ವಜ್ಞ**

ಮಳಲಿನ ಸಣ್ಣ ಸಣ್ಣ ಕಣಗಳಲ್ಲಿ ನುಣ್ಣಗಿರುವ ಕಲ್ಲಿನಲ್ಲಿ, ಬಣ್ಣಗಳಲ್ಲಿ, ಬರೆಯಲ್ಪಟ್ಟಿರುವ ಪಠದಲ್ಲಿ ಶಿವನಿರುವಾಗ ಮನುಷ್ಯನ ಹೃದಯದಲ್ಲಿಲ್ಲವೇ?

ಬಸವಣ್ಣನವರು ಹೇಳುತ್ತಾರೆ.

**ಕಲ್ಲೊಳಗೆ ಹೊನ್ನುಂಟು ಮರದೊಳಗೆ ಅಗ್ನಿವುಂಟು**
**ಹಾಲೊಳಗೆ ತುಪ್ಪ ಉಂಟು ಅಂತರ್ಯಾಮಿಯಲ್ಲಿ**
**ಶಿವನಿಹನು, ತೋರಬಲ್ಲ ಗುರು ಸುಳಿಯನು**
**ಕೂಡಲ ಸಂಗಮದೇವಾ**

ಕಲ್ಲಿನಲ್ಲಿ ಕನಕವಡಗಿದಂತೆ, ಮರದಲ್ಲಿ ಮಂದಾಗ್ನಿಯಡಗಿದಂತೆ, ಹಾಲೊಳಗೆ ತುಪ್ಪವಡಗಿದಂತೆ ಮಾನವನ ಮರೆಯಲ್ಲಿ ಮಹಾಘನ ದೇವನಿರವು ಅಡಗಿದೆ. ಆದರೆ ಮರವೆಯ ಮಾನವರಿಗೆ ಇದರ ಅರಿವಿಲ್ಲ.

ನೂರು ವಸಂತಗಳವರೆಗೆ ದಣಿಯದೆ ದುಡಿಯುವ ದೇಹ, ಅರಿಯುವ ತಲೆ, ಆನಂದಿಸುವ ಎದೆಯನ್ನು ನೀಡಿದ ಆ ಮಹಾದೇವನಿಗೆ ನಾವು ಸದಾ ಋಣಿಗಳಾಗಿರಬೇಕು. ಈ ಜಗದ ಸೊಬಗು ಕೆಡದಂತೆ, ವೈಭವ ನಾಶವಾಗದಂತೆ ನಾವು ಈ ಮೂರನ್ನೂ ಚೆನ್ನಾಗಿ ಬಳಸಿಕೊಂಡು ಸಾರ್ಥಕ ಜೀವನವನ್ನು ಸಾಗಿಸಬೇಕು. ಆಗ ನಮ್ಮ ದೇಹವೇ ದೇಗುಲವಾಗುತ್ತದೆ. ನಮ್ಮೊಳಗಿನ ಜೀವವೇ ದೇವನಾಗುತ್ತಾನೆ.

ಒಬ್ಬನೇ ಒಬ್ಬನೂ ನಿಗೂಢನೂ ಆದ ದೇವನು ಮನುಷ್ಯರ ಹಾಗೂ ಎಲ್ಲ ಜೀವರಾಶಿಗಳ ಹೃದಯದಲ್ಲಿ ನೆಲೆನಿಂತನು. ನಮ್ಮೊಳಗೆ ಇರುವ ಬ್ರಹ್ಮಾನಂದವನ್ನು ಪಡೆದುಕೊಳ್ಳುವ ಏಕೈಕ ದಾರಿ ಎಂದರೆ ನಾವೀ ದೇಹದೇವಾಲಯವನ್ನು ಅರಿತು ಅನುಭವಿಸಬೇಕು. ಮೊಬೈಲ್ ಅಥವಾ ಸಂಚಾರಿ ದೂರವಾಣಿಯು ತಿಳಿದವರಿಗೆ ಒಂದು

ಅಮೂಲ್ಯ ಸಾಧನ. ತಿಳಿಯದವರಿಗೆ ಅದೊಂದು ಲೋಹದ ತುಂಡು! ಹಾಗೆ ಈ ದೇಹವು ಅರಿಯದವರಿಗೆ ಒಂದು ಜಡ ವಸ್ತು. ಅರಿತ ಮಹಾತ್ಮರಿಗೆ ಅದೊಂದು ದಿವ್ಯಾಲಯ!!

**ನಿಜಾರ್ಥದಲ್ಲಿ ನಮ್ಮೊಳಗಿದ್ದಾನೆ ಭಗವಂತ**

ಗಿರಿ, ಕಂದರ, ತೀರ್ಥ ಕ್ಷೇತ್ರ, ದೇವಾಲಯ, ಪರ್ವತ, ಬೆಟ್ಟ ನದಿ ತಟ ಹೀಗೆ ನಾನಾ ಪ್ರದೇಶಗಳಲ್ಲಿ ಆ ಭಗವಂತನನ್ನು ಜನ ಹುಡುಕುತ್ತಿದ್ದಾರೆ. ಈವರೆಗೂ ಯಾರಿಗೂ ಭಗವಂತ ಇಂತಹ ಸ್ಥಳದಲ್ಲಿಯೇ ಇದ್ದೇನೆ ಎಂದೂ ಪ್ರಕಟಗೊಳಿಸಿಲ್ಲ ಹಾಗೂ ಅವನನ್ನು ಈ ಕ್ಷೇತ್ರದಲ್ಲಿ ಕಂಡಿರುವೆವು ಎಂದೂ ಯಾರೂ ಹೇಳಿಲ್ಲ. ಕೇವಲ ನಂಬಿಕೆ, ಭ್ರಮೆ, ಊಹೆ, ಪ್ರತೀತಿ ಮುಂತಾದ ರೀತಿಯಲ್ಲಿ ಭಗವಂತನನ್ನು ಹುಡುಕುವುದರಲ್ಲಿಯೇ ಮಾನವನು ನಿರತನಾಗಿದ್ದಾನೆ. ಆದರೆ ನಿಜವಾದ ಅರ್ಥದಲ್ಲಿ ಭಗವಂತ ನಮ್ಮಲ್ಲಿಯೇ ಇದ್ದಾನೆ. ಈ ಸತ್ಯಾಂಶವನ್ನು ಅರಿತು ತಮ್ಮ ಅನುಭಾವ ನುಡಿಗಳಲ್ಲಿ ಭಗವಾನ್ ಶ್ರೀ ರಾಮಕೃಷ್ಣ ಪರಮಹಂಸರಂತಹ ಯುಗಾವತಾರರು ತಿಳಿಸಿದ್ದರೂ ಮನುಷ್ಯನು ಭವಬಂಧನದ ಸಂಕೋಲೆಯಲ್ಲಿ ಸಿಲುಕಿ ನರಳುತ್ತಿರುವುದನ್ನು ಕಾಣಬಹುದಾಗಿದೆ. ರಾಮಕೃಷ್ಣರು ಬಹು ಸ್ಪಷ್ಟವಾಗಿ ಭಗವಂತ ನಮ್ಮಲ್ಲಿ ಅಂತರ್ಯಾಮಿಯಾಗಿದ್ದಾನೆ ಎಂದಿದ್ದಾರೆ. ಮೊದಲು ಹೃದಯಮಂದಿರದಲ್ಲಿ ಭಗವಂತನನ್ನು ಪ್ರತಿಷ್ಠಾಪನೆ ಮಾಡಿಕೊಳ್ಳಿ ಎಂಬುದನ್ನು ತಮ್ಮ ವಚನಾಮೃತದಲ್ಲಿ ಪದೇ ಪದೇ ಉಪದೇಶಿಸಿದ್ದಾರೆ. ಸಾಧಕನ ಹೃನ್ಮಂದಿರದಲ್ಲಿ ಭಗವಂತ ರಾರಾಜಿಸುತ್ತಾನೆ. ಅದಕ್ಕೆ ಹೃದಯ ಪರಿಶುದ್ಧತೆ ಮುಖ್ಯ. ಹೃದಯದಲ್ಲಿ ಕಲ್ಮಶಗಳಿದ್ದಲ್ಲಿ ಆ ದಿವ್ಯ ಪರಮಪುರುಷ ಅಲ್ಲಿ ಹೇಗೆ ತಾನೇ ನೆಲೆಸುತ್ತಾನೆ?

ರಾಮಕೃಷ್ಣರು, ನರೇಂದ್ರನಾಥರಲ್ಲಿ, ಅಂದರೆ ಸ್ವಾಮಿ ವಿವೇಕಾನಂದರಲ್ಲಿ ತ್ಯಾಗ, ವಿವೇಕದ ಜಾಗೃತಿಯನ್ನು ಮೂಡಿಸಿ ಹೃದಯ ಪರಿಶುದ್ಧವಾಗುವಂತೆ ಮಾಡುತ್ತಿದ್ದ ಪ್ರಸಂಗ ಅನೇಕ. ಈ ಕಲಿಯುಗಕ್ಕೆ ಭಕ್ತಿಪ್ರಧಾನವಾದ ಸಾಧನೆಯೇ ಮುಖ್ಯ ಎಂಬುದು ಅವರ ಉಪದೇಶ. ಭಕ್ತರು ಗುಡಿ, ಮಂದಿರಗಳಿಗೆ ಏಕೆ ಭೇಟಿ ನೀಡಬೇಕು ಎಂಬುದನ್ನು ರಾಮಕೃಷ್ಣರು ವಿವರಿಸುವ ಪರಿ ನೋಡಿ. ಅಲ್ಲಿ ಕಾಣುವ ಆ ದಿವ್ಯ ಪ್ರೇಮ ಸ್ವರೂಪಿ ದಯಾಮಯ ನಮ್ಮ ಹೃದಯದಲ್ಲಿ ಇರುವನೇ ಎಂಬುದನ್ನು ಖಾತ್ರಿಪಡಿಸಿಕೊಳ್ಳಲು ದೇವಾಲಯಗಳಿಗೆ ಭೇಟಿ ನೀಡಬೇಕೇ ವಿನಾ ದೇವಾಲಯವನ್ನು ಬಿಟ್ಟು ಬಂದಾಗ ಭಗವಂತನನ್ನು ಬಿಟ್ಟು ಬರುತ್ತೇನೆ ಎಂದಲ್ಲ. ಬದಲಾಗಿ ನಮ್ಮೊಳಗಿರುವ ಭಗವಂತನೇ ಅಲ್ಲಿಯೂ ವಿರಾಜಮಾನನಾಗಿದ್ದಾನೆ ಎಂದು ಅರಿಯಬೇಕು. ದೇವಸ್ಥಾನಗಳಲ್ಲಿ ಪೂಜಾದಿಗಳನ್ನು ಪೂರೈಸಿದ ನಂತರ ಧ್ಯಾನಾಸಕ್ತರಾಗಿ ಕುಳಿತಿರಬೇಕು ಎಂಬ ಸಂಪ್ರದಾಯವಿದೆ. ಏಕೆಂದರೆ ಆಗ ಅಲ್ಲಿ ಗೋಚರಿಸುವ ದಿವ್ಯಸ್ವರೂಪಿ ಭಗವಂತ ಭಗವಂತ ನನ್ನ ಹೃನ್ಮಂದಿರದಲ್ಲಿಯೂ ಇದ್ದಾನೆಂಬುದನ್ನು ಹೋಲಿಸಿ ನೋಡಬೇಕು. ಹೃದಯಮಂದಿರದಲ್ಲಿ ಭಗವಂತನು ಪ್ರತಿಷ್ಠಾಪಿಸಲ್ಪಟ್ಟಾಗ, ಆ ದಿವ್ಯತೆಯನ್ನು ಕಾಣುವ ಸ್ಥಿತಿ ಬಂದಾಗಲೇ ನಿಜವಾದ ಭಕ್ತ ಎನಿಸಿಕೊಳ್ಳುವನು. ಇದಕ್ಕೆ ಪರಮಹಂಸರೇ





ಮಹಾನ್ ನಿದರ್ಶನ.

ಪ್ರತಿ ಮಾನವನ ಅಂತರ್ಯದಲ್ಲೊಂದು ದೇವರ ಸಾಮ್ರಾಜ್ಯ ಇದ್ದೇ ಇದೆ. ಆದರೆ ಅದನ್ನು ಗುರುತಿಸುವುದರಲ್ಲಿ ನಾವು ಎಡವುತ್ತೇವೆ. "ನಿಮ್ಮ ದೇಹ ಪವಿತ್ರಾತ್ಮರ ದೇಗುಲ" ಎಂಬ ಸಂತ ಪಾಲರ ನುಡಿಯೊಂದಿದೆ. ಯಾವಾಗ ನಮ್ಮೊಳಗಿನ ದೇವರ ಗುಡಿಯನ್ನು, ದೇವರ ಸಾಮ್ರಾಜ್ಯವನ್ನು ಹುಡುಕಲು ನಾವು ಶಕ್ತರಾಗುವೆವೋ ಆಗ ನಾವು ಹೊರಗಿನ ಎಲ್ಲ ಜೀವಿಗಳಲ್ಲಿ ಮತ್ತು ಇಡೀ ವಿಶ್ವದಲ್ಲಿ ದೇವರ ಸಾಮ್ರಾಜ್ಯವನ್ನು ಹುಡುಕಲು ಶಕ್ತರಾಗುವೆವು

ಚತುರ್ವೇದಗಳ ಸಾರವೇ "ದೇಹೋ ದೇವಾಲಯ" ಎಂಬ ನುಡಿ:

**ನೀನು ಹುಡುಕುವ ದೈವ ಗುಡಿಯೊಳಗೆ ಇಲ್ಲ.**
**ನಿನ್ನಲ್ಲೆ ಇರುವನು ನೀನೆ ಅರಿತಿಲ್ಲ**
**ಪ್ರೇಮ ಕರುಣೆಗಳೆರಡು ಆತನ ರೂಪ!**

ಸ್ವಾಮಿ ವಿವೇಕಾನಂದರು ಅಂದಿನ ಯುವ ಸನ್ಯಾಸಿಗಳೊಡನೆ ಧ್ಯಾನ, ಜಪಾದಿಗಳನ್ನು ಮಾಡುತ್ತಿದ್ದಾಗ ಕಬೀರದಾಸರ ಈ ಗೀತೆಯನ್ನು ಹಾಡುತ್ತಿದ್ದರು:

**ಎಲ್ಲಿ ಅರಸುವೆ ನೀನು ಓ ನನ್ನ ಕಿಂಕರನೆ**
**ನಿನ್ನ ಬಳಿಯೇ ನಾನು ವಾಸಿಸಿರುವೇ. . .**
**ಗುಡಿ ಮಸೀದಿಯಲ್ಲಿಲ್ಲ, ಕಾಶಿ ಕೈಲಾಸದಲ್ಲೋ**
**ದ್ವಾರಕೆ ಅಯೋಧ್ಯೆಯಲ್ಲಿ ದೊರೆತವನಲ್ಲ?**
**ಶ್ರದ್ಧೆ ಎಲ್ಲಿದೆಯೋ ಅಲ್ಲಿ ದೊರೆಯುವೆ ನಾನು**
**ನನಗಾಗಿ ಹುಡುಕಿದರೆ ದೊರೆವೆ ನಾನು. . .**

ಭಗವಂತನು ಎಲ್ಲಿ ದೊರೆಯುತ್ತಾನೆ ಎಂಬ ಪ್ರಶ್ನೆಗೆ ಈ ಹಾಡಿನ ನುಡಿಗಳಲ್ಲಿ ಸ್ಫುಟವಾದ ಉತ್ತರ ದೊರೆಯುತ್ತಿದೆ ಎನ್ನಬಹುದು.

☐

ಆಸೆಯಾಮಿಷವಳಿದು ಹುಸಿ ವಿಷಯಂಗಳೆಲ್ಲಾ ಹಿಂಗಿ
ಸಂಶಯ ಸಂಬಂಧ ನಿಸ್ಸಂಬಂಧವಾಯಿತ್ತಯ್ಯಾ
ಎನ್ನ ಮನದೊಳಗೆ ಘನಪರಿಣಾಮವ ಕಂಡು
ಮನ ಮಗ್ನವಾಯಿತ್ತಯ್ಯಾ
ಅಭಿನವ ಮಲ್ಲಿಕಾರ್ಜುನಾ
ಪ್ರಭುದೇವರ ಕರುಣದಿಂದಾನು ಬದುಕಿದೆನು.
– ಡೋಹರ ಕಕ್ಕಯ್ಯ

# ಭಾವೈಕ್ಯತೆಯ ತಾಣ ಹಾರಕೂಡ ಚನ್ನಬಸವೇಶ್ವರ ಸಂಸ್ಥಾನ

**ಬಸವರಾಜ ಐನೋಳಿ**

**ಸಾ**ಮಾನ್ಯವಾಗಿ ಜಾತ್ರೆಗಳೆಂದರೆ ದೇವರ ಉತ್ಸವಗಳು. ವರ್ಷಕ್ಕೊಮ್ಮೆ ನಡೆಯುವ ಊರ ದೇವರ ಜಾತ್ರೆಗಳು. ಹಳ್ಳಿ ಜನ ಹೊಟ್ಟೆ ಹೊರೆಯಲು ಎಲ್ಲೇ ಹೋಗಿರಲಿ. ಊರ ಆರಾಧ್ಯದೈವದ, ದೊಡ್ಡ ಉತ್ಸವದ ಸಾಂಪ್ರದಾಯಿಕ ಜಾತ್ರೆಗೆ ತಪ್ಪಿಸುವಂತಿಲ್ಲ. ಬೆಳಗ್ಗೆ ಮಡಿ ಬಟ್ಟೆ ಧರಿಸಿ, ಶುಚಿರ್ಭೂತರಾಗಿ ಇರಬೇಕು. ಊರ ಜನರೆಲ್ಲ ಸೇರಿರುತ್ತಾರೆ. ಜಾತ್ರೆಗೆ ಬರದಿದ್ದರೆ ಗೆಳೆಯರು, ಬಂಧುಬಳಗದವರು ಮನೆಯರಿಗೆ ಪ್ರಶ್ನೆ ಮಾಡುತ್ತಾರೆ. ವರ್ಷದ ಜಾತ್ರೆ ತಪ್ಪಿಸಿದರೆ ಮುಂದೆ ಕೇಡಾಗಬಹುದೆಂಬ ಭಯದ ಜೊತೆಗೆ ಭಕ್ತಿಯೂ ಇರುತ್ತದೆ. ಜಾತ್ರೆಯೆಂದರೆ ಪಲ್ಲಕ್ಕಿ ಉತ್ಸವ, ಬಾಜಾ ಭಜಂತ್ರಿ, ಡೊಳ್ಳು ಕುಣಿತ, ಭಜನೆ ಮೇಳ, ಹಲಗೆ ವಾದನ, ಪುರವಂತರ ಕುಣಿತ ಇತ್ಯಾದಿ ಇತ್ಯಾದಿ ಎಲ್ಲವೂ ಸಹಜ ಎಂಬಂತೆ ನಡೆದುಕೊಂಡು ಹೋಗುತ್ತದೆ. ಕೊನೆಯಲ್ಲಿ ಭವ್ಯ ರಥೋತ್ಸವ.

ಕೆಲವು ಕಡೆ ಜಾತ್ರಾ ಮಹೋತ್ಸವದ ಅಂಗವಾಗಿ ೧೧ ದಿನಗಳ ಕಾಲ ಇಲ್ಲವೆ ೫ ದಿನ ಪುರಾಣ ಪುಣ್ಯಕಥೆ, ಪ್ರವಚನ-ಕೀರ್ತನೆ ಮತ್ತಿತರ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರು -ತ್ತಾರೆ. ನಿತ್ಯ ಅನ್ನದಾಸೋಹ ಏರ್ಪಾಡಾಗಿರುತ್ತದೆ. ಈ ಎಲ್ಲಾ ಕಾರ್ಯಕ್ರಮಗಳನ್ನು ಊರ ಜನರು, ಚಂದಾ ಮುಖಾಂತರ ಹಣ, ದವಸಧಾನ್ಯಗಳನ್ನು ಸಂಗ್ರಹಿಸುವ ಮೂಲಕ ಜಾತ್ರೆಯ ಖರ್ಚುವೆಚ್ಚಗಳನ್ನು ನಿರ್ವಹಿಸುತ್ತಾರೆ.

ಬಸವಕಲ್ಯಾಣ ತಾಲೂಕಿನ ಹಾರಕೂಡದ ಷ.ಬ್ರ. ಪೂಜ್ಯ ಡಾ. ಚನ್ನವೀರ ಶಿವಾಚಾರ್ಯರು, ತಮ್ಮ ಶ್ರೀಮಠದ ಹಿಂದಿನ ಪೀಠಾಧಿಪತಿಗಳು, ದೈವೀಪುರುಷರು, ಶಿವಸ್ವರೂಪಿಗಳೂ, ಪವಾಡಪುರುಷರಾದ ಲಿಂ. ಚನ್ನಬಸವ ಶಿವಯೋಗಿಗಳ ಜಾತ್ರೆಯನ್ನು ವರ್ಷದಲ್ಲಿ ಎರಡು ಬಾರಿ ನೆರವೇರಿಸುತ್ತಾರೆ. ಎಳ್ಳಮಾವಾಸೆಯ ನಂತರ ೫ನೇ ದಿನದಂದು ಹಾರಕೂಡ ಗ್ರಾಮದಲ್ಲಿ ಚನ್ನಬಸವ ಶಿವಯೋಗಿಗಳ ವಿಜೃಂಭಣೆಯ ಜಾತ್ರೆಯನ್ನು ನೆರವೇರಿಸುತ್ತಾರೆ. ಮಹಾಶಿವರಾತ್ರಿಯ ನಂತರ ಬರುವ ೧೧ನೇ ದಿನದಂದು ಚನ್ನಬಸವ ಶಿವಯೋಗಿಗಳವರ ಮತ್ತೊಂದು ಅರ್ಥಪೂರ್ಣ ಜಾತ್ರೆಯನ್ನು ಪೂಜ್ಯರು ಕಲಬುರಗಿ ಜಿಲ್ಲೆಯ ಚಿಂಚೋಳಿಯಲ್ಲಿ ನೆರವೇರಿಸುತ್ತಾರೆ. ಎಲ್ಲಾ ಜಾತ್ರೆಗಳಿಗಿಂತ ಈ ಜಾತ್ರೆ ಬಹು

ಕಾಯಕ ನಿಲಯ, ಬಸವ ನಗರ ಚಂದಾಪೂರ, ತಾ: ಚಿಂಚೋಳಿ ಜಿ: ಕಲಬುರಗಿ - ೫೮೫೩೦೫
ಮೊ.ನಂ. : ೯೭೩೧೯೯೨೪೯೦



ವಿಭಿನ್ನವಾಗಿರುತ್ತವೆ. ಪೂಜ್ಯ ಡಾ. ಚನ್ನವೀರ ಶಿವಾಚಾರ್ಯರು ಸಾಂಪ್ರದಾಯಿಕ ಜಾತ್ರಾ ಮಹೋತ್ಸವಗಳಿಗೆ ಅಧುನಿಕ ಸ್ಪರ್ಶ ನೀಡಿದ್ದಾರೆ. ಜಾತ್ರಾ ಮಹೋತ್ಸವವನ್ನು ಸಾಂಸ್ಕೃತಿಕ ಉತ್ಸವಗಳನ್ನಾಗಿಸಿದ ಕೀರ್ತಿಗೆ ಭಾಜನರಾಗಿದ್ದಾರೆ.

ಅವರ ವ್ಯಕ್ತಿತ್ವವೇ ಅಂಥಾದ್ದು. ಸದಾ ಹಸನ್ಮುಖಿಗಳು. ನಗುಮೊಗದ ಮಾತೃ ಸ್ವರೂಪಿಗಳು. ಭಕ್ತರನ್ನು ಸೂಜಿಗಲ್ಲಿನಂತೆ ಸೆಳೆಯುತ್ತಾರೆ. ಒಮ್ಮೆ ಅವರನ್ನು ನೋಡಿ ದರ್ಶನಾಶೀರ್ವಾದ ಪಡೆದರೆ ಮತ್ತೆ ಮತ್ತೆ ಭೇಟಿಯಾಗಬೇಕೆನಿಸುತ್ತದೆ. ಅವರೊಡನೆ ಮಾತನಾಡಬೇಕು, ಮಾತುಗಳನ್ನು ಕೇಳಬೇಕೆನಿಸುತ್ತದೆ. ತಮ್ಮ ಮನೋವೇದನೆಗಳಿಗೆ ಪರಿಹಾರ ಬಯಸಿ ಬರುವ ಸಹಸ್ರಾರು ಭಕ್ತರನ್ನು ಪ್ರೀತಿಯಿಂದ ಮಾತನಾಡುತ್ತಾರೆ. ಅವರ ಮನೋವ್ಯಾಕುಲತೆಗೆ ಪರಿಹಾರೋಪದೇಶಗಳನ್ನು ನೀಡುತ್ತಾರೆ. ದುಃಖ ದುಮ್ಮಾನಗಳನ್ನು ಹೊತ್ತುಕೊಂಡು ಬಂದ ಭಕ್ತರು ಪೂಜ್ಯರ ಆಶೀರ್ವಾದದ ನುಡಿಗಳನ್ನು ಕೇಳಿ ನಗು ನಗುತ್ತಾ ಹಿಂದಿರುಗುತ್ತಾರೆ. ಶ್ರೀಮಠದ ನಿತ್ಯದಾಸೋಹದಲ್ಲಿ ಪ್ರಸಾದ ಸ್ವೀಕರಿಸಿ ಭಕ್ತಿ ಭಾವ ಮೆರೆಯುತ್ತಾರೆ.

ಪೂಜ್ಯರು ಆಯೋಜಿಸುವ ಜಾತ್ರೆಗಳು ಸಾಂಸ್ಕೃತಿಕ ಉತ್ಸವಗಳಾಗಿ ಪರಿವರ್ತನೆ -ಗೊಂಡಿವೆ. ಹಾರಕೂಡದ ಚನ್ನಬಸವ ಶಿವಯೋಗಿಗಳ ಜಾತ್ರಾ ಮಹೋತ್ಸವದಲ್ಲಿ ಆಬಾಲವೃದ್ಧರಾದಿಯಾಗಿ ಎಲ್ಲರೂ ಪಾಲ್ಗೊಳ್ಳುತ್ತಾರೆ. ಎಲ್ಲಾ ವಯೋಮಾನದವರಿಗೂ ಕಾರ್ಯಕ್ರಮಗಳನ್ನು, ಸ್ಪರ್ಧೆಗಳನ್ನು ಏರ್ಪಡಿಸಿರುತ್ತಾರೆ. ಜಾತ್ರಾ ಮಹೋತ್ಸವದ ಅಂಗವಾಗಿ ಶಾಲಾ ಮಕ್ಕಳಿಗಾಗಿ ವಚನ ಕಂಠಪಾಠ ಸ್ಪರ್ಧೆ, ರಂಗೋಲಿ ಸ್ಪರ್ಧೆ, ರಸಪ್ರಶ್ನೆ ಸ್ಪರ್ಧೆಗಳನ್ನು ಏರ್ಪಡಿಸಿ ವಿಜೇತರಿಗೆ ಬಹುಮಾನ ನೀಡುವ ಸತ್ಸಂಪ್ರದಾಯ ಹಾಕಿದ್ದಾರೆ.

ಯುವಕರಿಗಾಗಿ ಅಂತಾರಾಜ್ಯ ಮಟ್ಟದ ವಾಲಿಬಾಲ್ ಸ್ಪರ್ಧೆ ನಡೆಯುತ್ತದೆ. ಕ್ರೀಡಾಪಟುಗಳಿಗೆ ಇದು ಕ್ರೀಡಾಜಾತ್ರೆಯಾಗಿ ಮಾರ್ಪಟ್ಟಿದೆ. ಎಲ್ಲಾ ಜಾತಿ, ಜನಾಂಗಗಳ ಜನರು ಪಾಲ್ಗೊಂಡು ಆನಂದ ಪಡುತ್ತಾರೆ. ಜಾತ್ರಾ ಮಹೋತ್ಸವದಲ್ಲಿ ಪ್ರವಚನ ಪಟುಗಳು, ಸಾಹಿತಿಗಳು, ತಬಲಾ ಕಲಾವಿದರು, ಹಾರ್ಮೋನಿಯಂ ನುಡಿಸುವವರು, ಸಂಗೀತಗಾರರಿಗೆ ವೇದಿಕೆ ಒದಗಿಸಿಕೊಟ್ಟು "ಚನ್ನಶ್ರೀ ಪ್ರಶಸ್ತಿ" ನೀಡಿ ಗೌರವಿಸುತ್ತಾರೆ. ಗೀಗೀ ಪದ, ಭಜನೆ, ಡೊಳ್ಳು ಕುಣಿತ, ಹಲಗೆ ವಾದನ, ಶಹನಾಯಿ, ನಂದಿಕೋಲು, ಝಾಂಜ ಪತಾಕ ಮುಂತಾದ ಜನಪದ ಕಲಾವಿದರೂ ಮೆರವಣಿಗೆಯಲ್ಲಿ ಭಾಗವಹಿಸಿ ಪೂಜ್ಯರಿಂದ ಆಶೀರ್ವಾದ ಪಡೆಯುತ್ತಾರೆ. ಜೋಗುಳ ಪದಗಳನ್ನು ಹಾಡಲು ಹಾಗೂ ಕುಂಭ ಮೆರವಣಿಗೆಯಲ್ಲಿ ಪಾಲ್ಗೊಳ್ಳಲು ಮಹಿಳೆಯರಿಗೆ ಅವಕಾಶ ಒದಗಿಸಿಕೊಡಲಾಗುತ್ತದೆ. ರಥ ಅಲಂಕಾರ ಮಾಡುವ ವೃತ್ತಿ ಪುಷ್ಪಗಾರರಿಗೆ, ಜಾತ್ರೆಗೆ ಬರುವ ಭಕ್ತರಿಗೆ ಮುದ ನೀಡುವ ಮದ್ದುಸುಡುವ ಕಲಾವಿದರಿಗೂ ಜಾತ್ರೆಯಲ್ಲಿ ಗೌರವಿಸಲಾಗುತ್ತದೆ.

"ಜಾತ್ರಾ ಮಹೋತ್ಸವದಲ್ಲಿ ಅಂತಾರಾಜ್ಯ ಪೈಲ್ವಾನರಿಂದ ಜಂಗೀ ಕುಸ್ತಿ ಸ್ಪರ್ಧೆಯನ್ನು

ಆಯೋಜಿಸುತ್ತಾರೆ. ತನ್ಮೂಲಕ ಗ್ರಾಮೀಣ ಸಾಹಸ ಕ್ರೀಡಾಕಲೆಯನ್ನು ಪೋಷಿಸಿ, ಬೆಳೆಸುವ ಕಾರ್ಯವನ್ನು ಬಹಳ ಮುತುವರ್ಜಿ ವಹಿಸಿ ಪೂಜ್ಯರು ಮಾಡುತ್ತಿದ್ದಾರೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಜಾತ್ರಾ ಮಹೋತ್ಸವದಲ್ಲಿ ರೈತರು ಕ್ರಿಯಾಶೀಲವಾಗಿ ಪಾಲ್ಗೊಳ್ಳುವಂತೆ ಮಾಡುತ್ತಿದ್ದಾರೆ. ಪ್ರತಿವರ್ಷ ರೈತರು ಸಾಕಿ ಬೆಳೆಸುವ ಉತ್ತಮ ಎತ್ತುಗಳನ್ನು ಆರಿಸಿ, ಅವುಗಳ ಮಾಲೀಕರಿಗೆ ಬಹುಮಾನ ನೀಡಿ ಆಶೀರ್ವದಿಸುತ್ತಿದ್ದಾರೆ. ತನ್ಮೂಲಕ ಪಶುಪಾಲನೆಗೆ ಪ್ರೋತ್ಸಾಹ ನೀಡುತ್ತಿದ್ದಾರೆ.

ಬಹಳ ವೈಜ್ಞಾನಿಕವಾಗಿ ಹಾಗೂ ವೈಚಾರಿಕವಾಗಿ ಆಲೋಚಿಸುವ ಸ್ವಾಮಿಜಿಯವರು ತಮ್ಮ ಬಳಿ ಬರುವ ಭಕ್ತರಿಗೆ ಸರಿಯಾದ ಮಾರ್ಗ ತೋರುತ್ತಾರೆ. ಅನಾರೋಗ್ಯ ಪೀಡಿತರಾದವರು ತಮ್ಮ ಕಷ್ಟಕಾರ್ಪಣ್ಯಗಳನ್ನು ಹೇಳಿಕೊಂಡಾಗ, ಪೂಜ್ಯರು ಅವರಿಗೆ ಸಂಬಂಧಪಟ್ಟ ತಜ್ಞ ವೈದ್ಯರ ಹತ್ತಿರ ಪರೀಕ್ಷಿಸಿಕೊಳ್ಳಲು ಹೇಳುತ್ತಾರೆ. ಮಕ್ಕಳು, ಹಿರಿಯರು, ವೃದ್ಧರು, ಮಹಿಳೆಯರಿಗೆ ಅವರವರ ವಯೋಮಾನಕ್ಕೆ ತಕ್ಕಂತೆ ರೋಗರುಜಿನಗಳಿಗೆ ಸಂಬಂಧಿಸಿದಂತೆ ವೈದ್ಯಕೀಯ ಸಲಹೆ ಪಡೆಯಲು ಸೂಚಿಸುತ್ತಾರೆ. ತಾಯಿತ ಧರಿಸುವುದರಿಂದ, ನಿಂಬೆಕಾಯಿ ಇಟ್ಟುಕೊಳ್ಳುವುದರಿಂದ ರೋಗ ಕಡಿಮೆಯಾಗುತ್ತದೆಂದು ಅವರೆಂದೂ ಹೇಳುವುದಿಲ್ಲ. ಮನೆಯಲ್ಲಿ ಹಿರಿಯರು, ವಯಸ್ಸಾದವರು, ನಿಧನ ಹೊಂದಿದರೆ ಅವರು ಸತ್ತುಹೋದ ಘಳಿಗೆ ಸರಿಯಾಗಿಲ್ಲ, ಹೀಗಾಗಿ ಮನೆಯವರು ಆರು ತಿಂಗಳು ಮನೆ ಖಾಲಿ ಮಾಡಬೇಕು, ಇಲ್ಲದಿದ್ದರೆ ಕೇಡಾಗುತ್ತದೆ ಎಂಬ ಅನಿಷ್ಟ ಪದ್ಧತಿ ನಮ್ಮ ನಾಡಿನಲ್ಲಿ ಇನ್ನೂ ಜೀವಂತವಾಗಿದೆ. ಮನೆ ಬಿಡುವುದರಿಂದ ಮನೆಯವರು ಕಷ್ಟ ಪಡಬೇಕಾಗುತ್ತದೆ. ಸಾಮಾನು ಸರಂಜಾಮುಗಳನ್ನು ಸಾಗಿಸುವುದು, ದನ ಕರುಗಳ ಪಾಲನೆ ಇನ್ನೂ ಕಷ್ಟವಾಗುತ್ತದೆ. ಆರು ತಿಂಗಳ ನಂತರ ಮುಚ್ಚಿದ ಬಾಗಿಲು ತೆರೆಯಬೇಕು. ಸುಣ್ಣ ಬಣ್ಣ ಬಳಿಯಬೇಕು. ಪೂಜೆ, ಪುನಸ್ಕಾರ ಮಾಡಬೇಕು. ಬಾಜಾ ಭಜಂತ್ರಿಯವರಿಗೆ ಹಣ ಖರ್ಚು ಮಾಡಬೇಕು. ಇದೆಲ್ಲಾ ಬಡ ಬಗ್ಗರಿಗೆ, ಮಧ್ಯಮವರ್ಗದ ಜನರಿಗೆ ಬಹಳ ಪ್ರಯಾಸದ ಕೆಲಸ. ಇದ್ದ ಮನೆ ಬಿಟ್ಟುಕೊಟ್ಟರೆ ಗ್ರಾಮಗಳಲ್ಲಿ ಮತ್ತೊಂದು ಮನೆ ಸಿಗುವುದು ಬಹಳ ದುರ್ಲಭ. ಇದಕ್ಕೆ ಪರಿಹಾರ ಕೇಳಿ ಬಂದ ಭಕ್ತರಿಗೆ ಡಾ. ಚೆನ್ನವೀರ ಶಿವಾಚಾರ್ಯರು ಸರಳ ಪರಿಹಾರ ಸೂಚಿಸುತ್ತಾರೆ. ಮನೆ ಬಿಟ್ಟು ಹೋಗುವ ಮಾತೇ ಇಲ್ಲ. ಇದ್ದ ಮನೆ ಶುಚಿಗೊಳಿಸಿ ಇಷ್ಟದೇವರ ಪೂಜೆ ಮಾಡಿ ಅದೇ ಮನೆಯಲ್ಲಿ ನಿಶ್ಚಿಂತೆಯಿಂದ ಇರಬಹುದು. ಇದರಿಂದ ಯಾವುದೇ ಕೇಡಾಗುವುದಿಲ್ಲ. ಹಾನಿ ಸಂಭವಿಸುವುದಿಲ್ಲ. ಸತ್ತವರಿಂದ ಇದ್ದವರಿಗೆ ಎಂದೂ ಕೇಡಾಗುವುದಿಲ್ಲ ಎಂದು ಪೂಜ್ಯರು ಧೈರ್ಯ ತುಂಬುತ್ತಾರೆ. ಇವರ ಈ ಅಮೃತವಾಣಿಯಿಂದ ಹಾರಕೂಡ ಗ್ರಾಮದ ಸುತ್ತಮುತ್ತಲ ನೂರಾರು ಹಳ್ಳಿಗಳ ಜನರು ನಿಶ್ಚಿಂತೆಯಿಂದ ಬದುಕು ಸಾಗಿಸುತ್ತಿದ್ದಾರೆ.

ಅವರ ಶ್ರೀಮಠದಲ್ಲಿ ನಿರಂತರವಾಗಿ ಅನ್ನದಾಸೋಹ ಇರುತ್ತದೆ. ದಾಸೋಹದಲ್ಲಿ





ಊಟ ಬಡಿಸಲು ಸಮಯ ನಿಗದಿಪಡಿಸಿರುವುದಿಲ್ಲ. ದಿನದ ಇಪ್ಪತ್ನಾಲ್ಕು ಗಂಟೆಯೂ ಪ್ರಸಾದ ಇರುತ್ತದೆ. ಮಠದಲ್ಲಿ ಅನ್ನ, ಸಾರು ಬಡಿಸುವ ಕಾಟಾಚಾರದ ದಾಸೋಹ ಇರುವುದಿಲ್ಲ. ಪ್ರತಿನಿತ್ಯ ರೊಟ್ಟಿ, ಪಲ್ಲೆ, ಅನ್ನ, ಸಾರು, ಹಿಂಡಿ, ಮೊಸರು ಇರುತ್ತದೆ. ವಿಶೇಷ ದಿನಗಳಲ್ಲಿ ಚಪಾತಿ, ಪಾಯಸ, ಶಿರಾ, ಸಜ್ಜೆರೊಟ್ಟಿ, ಕಡುಬು, ಹೋಳಿಗೆ, ತುಪ್ಪ ಸಿಗುತ್ತದೆ. ಕರೋನಾದ ಲಾಕ್‌ಡೌನ್ ಸಂದರ್ಭದಲ್ಲಿ ಎಲ್ಲಾ ದೇವಸ್ಥಾನಗಳು, ಮಠಮಂದಿರಗಳ ಬಾಗಿಲು ಬಂದ್ ಆಗಿದ್ದವು. ಆದರೆ ಹಾರಕೂಡ ಹಿರೇಮಠದ ದಾಸೋಹ ಮಹಾಮನೆಯ ಬಾಗಿಲು ಬಂದ್ ಆಗಿರಲಿಲ್ಲ. ಇದು ಬಸವಣ್ಣನವರ ಮಹಾಮನೆ ಇದ್ದಂತೆ. ಭಕ್ತರಿಗಾಗಿ ಸದಾ ತೆರೆದೇ ಇದ್ದು ದಾಸೋಹಕೈಂಕರ್ಯ ಮುಂದುವರೆಸಿಕೊಂಡು ಬಂದಿರುವುದು ಶ್ರೀಮಠದ ಹೆಗ್ಗಳಿಕೆಯಾಗಿದೆ. ಇಲ್ಲಿ ಗುರುಲಿಂಗ ಶಿವಾಚಾರ್ಯರ ಹೆಸರಿನಲ್ಲಿ ಉಚಿತ ವಸತಿಶಾಲೆ ಇದೆ. ಈ ಶಾಲೆಯನ್ನು ಪೂಜ್ಯರು ಕಳೆದ ೨೫ ವರ್ಷಗಳಿಂದ ನಡೆಸಿಕೊಂಡು ಬರುತ್ತಿದ್ದಾರೆ. ಇಲ್ಲಿ ಅಭ್ಯಾಸ ಮಾಡುವ ಮಕ್ಕಳಿಗೆ ಪ್ರತಿ ನಿತ್ಯ ಮೂರು ಹೊತ್ತೂ ಉಚಿತವಾಗಿ ಪ್ರಸಾದದ ವ್ಯವಸ್ಥೆ ಮಾಡಿದ್ದಾರೆ. ಸುಸಜ್ಜಿತ ವಸತಿ ಸೌಕರ್ಯವನ್ನು ಕಲ್ಪಿಸಿದ್ದಾರೆ.

ಹಾರಕೂಡ ಗ್ರಾಮ ಅಲ್ಲದೆ ಕಲಬುರಗಿ ಜಿಲ್ಲೆಯ ಚಿಂಚೋಳಿ ಹಾಗೂ ನಿಡಗುಂದ ಗ್ರಾಮದಲ್ಲಿ ಪೂಜ್ಯರು ಶಿಕ್ಷಣಸಂಸ್ಥೆಗಳನ್ನು ಪ್ರಾರಂಭಿಸಿದ್ದಾರೆ. ಮೂರು ಸಾವಿರಕ್ಕೂ ಹೆಚ್ಚು ಮಕ್ಕಳು ಇಲ್ಲಿ ಅಭ್ಯಾಸ ಮಾಡುತ್ತಿದ್ದಾರೆ. ಒಂದು ನೂರಕ್ಕೂ ಹೆಚ್ಚು ಸಿಬ್ಬಂದಿ ಸೇವೆ ಸಲ್ಲಿಸುತ್ತಿದ್ದಾರೆ. ಶಿಶುವಿಹಾರದಿಂದ ಪದವಿಪೂರ್ವ ಕಾಲೇಜಿನವರೆಗೆ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ನೀಡುತ್ತಿದ್ದಾರೆ. ಅದಕ್ಕಾಗಿಯೇ ಉತ್ತರ ಕರ್ನಾಟಕದಲ್ಲಿ ಇವರು ಕನ್ನಡದ ಸ್ವಾಮಿಗಳೆಂದು ಮನೆ ಮಾತಾಗಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ಸಿದ್ಧಗಂಗಾ ಮಠ ಬಿಟ್ಟರೆ, ಅಚ್ಚುಕಟ್ಟಾಗಿ ಅನ್ನದಾಸೋಹ, ಜ್ಞಾನದಾಸೋಹ ಮಾಡುವ ಮಠವೆಂದರೆ ಹಾರಕೂಡದ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ ಎಂದು ಪ್ರಖ್ಯಾತಿ ಪಡೆದಿದೆ.

ಡಾ. ಚನ್ನವೀರ ಶಿವಾಚಾರ್ಯರ ಸಂಕ್ಷಿಪ್ತ ಪರಿಚಯ : ಕಲ್ಯಾಣ ಕರ್ನಾಟಕದ ನಡೆದಾಡುವ ದೇವರು ಎಂದು ಭಕ್ತರ ಪ್ರೀತಿಗೆ ಪಾತ್ರರಾಗಿ, ಅಪಾರ ಕನ್ನಡ ಮತ್ತು ಸಂಸ್ಕೃತ ಭಾಷಾಪಾಂಡಿತ್ಯ ಹೊಂದಿ, ನಿರ್ಮಲ ಮನಸ್ಸಿನಿಂದ ಸದಾ ಒಂದಿಲ್ಲೊಂದು ರೀತಿಯ ಸಾಮಾಜಿಕ ಕಳಕಳಿ ಉಳ್ಳ ಮಠಾಧೀಶರು ಹಾಗೂ ಸಾಹಿತಿಗಳಾಗಿ ನಾಡಿನಾದ್ಯಂತ ಚಿರಪರಿಚಿತರಾದವರು ಪೂಜ್ಯ ಷ.ಬ್ರ. ಡಾ. ಶ್ರೀ ಚೆನ್ನವೀರ ಶಿವಾಚಾರ್ಯ ಮಹಾಸ್ವಾಮಿಗಳು.

ಇವರು ಬೀದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಹಾರಕೂಡ ಗ್ರಾಮದ ವೇದಮೂರ್ತಿ ಶ್ರೀ ಕರಬಸಯ್ಯಾ ಹಿರೇಮಠ ಮತ್ತು ಸುಭದ್ರಾಬಾಯಿ ತಾಯಿಯವರ ಮಕ್ಕಳಾಗಿ ದಿನಾಂಕ ೧.೭.೧೯೬೩ ರಂದು ಜನಿಸಿದ್ದಾರೆ. ಮುಂಚೆ ಇವರ ಹೆಸರು ರೇವಣಸಿದ್ದಯ್ಯ ಎಂದಿತ್ತು. ಪ್ರಾಥಮಿಕ ಶಿಕ್ಷಣ ಹಾರಕೂಡದಲ್ಲಿ, ಪ್ರೌಢ ಶಿಕ್ಷಣ ಕಲಬುರಗಿಯ ಶರಣಬಸವೇಶ್ವರ ಪ್ರೌಢ ಶಾಲೆಯಲ್ಲಿ, ಬೆಳಗಾವಿಯ ಕೆ.ಎಲ್.ಇ.ಶಿಕ್ಷಣ ಸಂಸ್ಥೆಯ ಕಾಡಸಿದ್ದೇಶ್ವರ

ಕಾಲೇಜಿನಲ್ಲಿ, ಪದವಿಯನ್ನು ೧೯೮೮ರಲ್ಲಿ ಪೂರೈಸಿದ ಇವರು ೧೯೮೬ ರಲ್ಲಿ ಧಾರವಾಡ ವಿಶ್ವವಿದ್ಯಾಲಯದಿಂದ ಎಂ.ಎ. ಪದವಿ ಪಡೆದಿದ್ದಾರೆ. ಹುಬ್ಬಳ್ಳಿಯ ಮೂರು ಸಾವಿರ ಮಠದ ಶ್ರೀ ಗಂಗಾಧರ ರಾಜಯೋಗೀಂದ್ರ ಜಗದ್ಗುರುಗಳು ಇವರನ್ನು ಪ್ರೀತಿಯಿಂದ ಬರಮಾಡಿಕೊಂಡು ಶ್ರೀಮಠದಲ್ಲಿ ಪೂಜಾಪ್ರಸಾದಕ್ಕೆ ಅನುಕೂಲ ಮಾಡಿಕೊಡುವುದರೊಂದಿಗೆ ಉತ್ತಮ ವಿಚಾರ ಚಿಂತನೆಗಳನ್ನು ಬೋಧಿಸಿದ್ದಾರೆ. ಪರಿಸರ ಪ್ರಜ್ಞೆ, ಧರ್ಮ, ಶಿಕ್ಷಣ, ಸಂಸ್ಕೃತಿ ಸಂವರ್ಧನೆ ಮೂಲಕ ೧೯೯೬ ಏಪ್ರಿಲ್ ೨೫ ರಂದು ಹಾರಕೂಡ ಹಿರೇಮಠ ಸಂಸ್ಥಾನದ ಪಟ್ಟಾಧಿಕಾರ ಹೊಂದಿ ಶ್ರೀ ರೇವಣಸಿದ್ಧ ದೇವರು ಶ್ರೀ ಷಟ್‌ಸ್ಥಲ ಬ್ರಹ್ಮ ಚೆನ್ನವೀರ ಶಿವಾಚಾರ್ಯ ಮಹಾಸ್ವಾಮಿಗಳಾಗಿ ರೂಪುಗೊಂಡಿದ್ದಾರೆ. ದಕ್ಷಿಣ ಭಾರತದಲ್ಲಿ ಕೋಟ್ಯಂತರ ಭಕ್ತರ ಪ್ರೀತಿಗೆ ಪಾತ್ರರಾಗಿದ್ದಾರೆ. ಶ್ರೀಮಠದ ಏಳಿಗೆಯೊಂದಿಗೆ ಕಲೆ, ಸಾಹಿತ್ಯ, ಸಂಗೀತ, ಶಿಕ್ಷಣ ಪ್ರೇಮಿಯಾಗಿದ್ದಾರೆ. "ಚೆನ್ನ ಚಿಂತನ" ಎಂಬ ಪುಸ್ತಕವನ್ನು ರಚಿಸಿ ಲೇಖಕರಾಗಿ ಖ್ಯಾತರಾಗಿದ್ದಾರೆ. ತುಂಬ ಮೌಲಿಕ ವಿಚಾರಗಳನ್ನು ಹೊಂದಿರುವ ಈ ಕೃತಿಯು "ಪ್ರಜಾವಾಣಿ" ಪತ್ರಿಕೆಯಲ್ಲಿ ಅಂಕಣ ಬರಹವಾಗಿ ಪ್ರಕಟಗೊಂಡು ಅಪಾರ ಜನಮೆಚ್ಚುಗೆ ಗಳಿಸಿದೆ. ಮತ್ತು 'ಹಡಪದ ಅಪ್ಪಣ್ಣನ ನೂರೊಂದು ವಚನಗಳು' ಎಂಬ ಕೃತಿಯನ್ನು ಸಂಪಾದಿಸಿದ್ದಾರೆ. ಈ ಕೃತಿ ಹುಬ್ಬಳ್ಳಿಯ ಮೂರು ಸಾವಿರ ಮಠದಿಂದ ಪ್ರಕಟವಾಗಿದೆ. ಹಾಗೂ "ಚನ್ನ ಚಂದ್ರಾಹಾರ" ಎಂಬ ಕವನಸಂಕಲನವನ್ನೂ ಪ್ರಕಟಿಸಿದ್ದಾರೆ. ಅಲ್ಲದೆ 'ಕ' ಅಕ್ಷರದಿಂದ ಕೊನೆಗೊಳ್ಳುವ ಶಿಕ್ಷಕ, ಸೈನಿಕ, ಕೃಷಿಕ, ಬಾಲಕ, ಸೇವಕ, ಮೇಲ್ವಿಚಾರಕ ಮುಂತಾದ ಪದಗಳನ್ನಿಟ್ಟುಕೊಂಡು "ಚೆನ್ನಕಾಂತ ವಿಚಾರ ಬಿಂದುಗಳು" ಎಂಬ ಪ್ರಬಂಧಸಂಕಲನ ರಚಿಸಿದ್ದಾರೆ. ಶ್ರೀಗಳು ಧರ್ಮ, ಸಮಾಜ, ಶಿಕ್ಷಣ ಮತ್ತು ಸಾಹಿತ್ಯದೊಂದಿಗೆ ನಿಕಟ ಸಂಬಂಧ ಹೊಂದಿರುವುದರೊಂದಿಗೆ, ಧಾರ್ಮಿಕ ತಳಹದಿಯಲ್ಲಿ ಚಿಂಚೋಳಿ, ದುಬಲಗುಂಡಿ, ಸೇಡೋಳ್, ಸರಜವಳಗಾ, ಗದಲೇಗಾಂವ, ತರೂರಿ, ಜೀವಣಗಿ ಶಾಖಾ ಮಠಗಳ ಭಕ್ತರ ಒಡನಾಡಿಗಳಾಗಿ ಗುರುತಿಸಿಕೊಂಡಿದ್ದಾರೆ. ಶೈಕ್ಷಣಿಕ ಕ್ಷೇತ್ರದಲ್ಲಿಯೂ ತುಂಬ ಕಾಳಜಿ ಹೊಂದಿದ ಇವರು ಹಾರಕೂಡ, ಭಾಲ್ಕಿ, ಚಿಂಚೋಳಿ ಮುಂತಾದ ಕಡೆಗಳಲ್ಲಿ ಶಿಶುವಿಹಾರ, ಪ್ರಾಥಮಿಕ, ಪ್ರೌಢಶಾಲೆ ಕಾಲೇಜುಗಳನ್ನು ನಡೆಸುತ್ತ ಬಡ, ಮಧ್ಯಮ ವರ್ಗದ ಮಕ್ಕಳ ಶಿಕ್ಷಣಕ್ಕೆ ಒತ್ತು ನೀಡಿ ಶ್ರಮಿಸುತ್ತಿದ್ದಾರೆ. ನಾಡಿನಾದ್ಯಂತ ಹಲವಾರು ಹಿರಿ-ಕಿರಿಯ ಲೇಖರ ಮೌಲಿಕ ಕೃತಿಗಳನ್ನು ಪ್ರಕಟಿಸಿದ್ದಾರೆ. ಪ್ರತಿ ವರ್ಷ ಶ್ರೀ ಗುರುಲಿಂಗ ಶಿವಾಚಾರ್ಯರ ಪುಣ್ಯಸ್ಮರಣೆಯ ಅಂಗವಾಗಿ ಅನುಭಾವ ಪ್ರಚಾರೋಪನ್ಯಾಸ ಮಾಲೆ ಕಾರ್ಯಕ್ರಮ ನಡೆಸುವುದರೊಂದಿಗೆ ಪುಸ್ತಕಗಳ ಬಿಡುಗಡೆ ಮಾಡುತ್ತಾರೆ. ಪ್ರಖ್ಯಾತ ಸಂಶೋಧಕರೂ, ಶ್ರೀಮಠದ ಸಾಹಿತ್ಯ ಸಲಹೆಗಾರರೂ ಆದ ಡಾ. ಸಂಗಮೇಶ ಸವದತ್ತಿಮಠ ಅವರು ಸಂಪಾದಿಸಿದ "ವಿಷಯ ವಚನ ಸಂಪುಟಗಳು" ಇಂಗ್ಲೆಂಡ್, ಕೆನಡಾ, ಅಮೇರಿಕದಲ್ಲಿರುವ ಕನ್ನಡಿಗರ ಗಮನ ಸೆಳೆದಿವೆ. ಕೆನಡಾದ ಕನ್ನಡ ಸಂಘದವರು ಪೂಜ್ಯರಿಗೆ





ಪ್ರಶಂಸಾಪತ್ರವನ್ನು ನೀಡಿದ್ದಾರೆ. ಈ ೧೫ ಸಂಪುಟಗಳ ಅಪರೂಪದ ಸಂಪಾದನೆಗಾಗಿ ಡಾ. ಸಂಗಮೇಶ ಸವದತ್ತಿಮಠರಿಗೆ ರಮಣಶ್ರೀ ಪ್ರಶಸ್ತಿ ಲಭಿಸಿದೆ. ಇಲ್ಲಿಯವರೆಗೆ ಅವರಿಂದ ೮೭ ಕೃತಿಗಳು ಹೊರ ಬಂದಿರುವುದು ನೋಡಿದರೆ ಅವರ ಸಾಹಿತ್ಯ ಪ್ರೀತಿ, ಕಾಳಜಿ ಎದ್ದು ತೋರುತ್ತದೆ. ಅಷ್ಟೇ ಅಲ್ಲದೆ ಶ್ರೀಗಳವರು ನಾಡಿನಾದ್ಯಂತ ಉತ್ತಮ ಸಾಹಿತ್ಯ ರಚಿಸಿ ಖ್ಯಾತರಾದ ಹಿರಿಯ ಸಾಹಿತಿಗಳಿಗೆ ೨೦೧೧ ರಿಂದ ಶ್ರೀ ಚೆನ್ನ ರೇಣುಕ ಬಸವ ಪ್ರಶಸ್ತಿಯನ್ನು ನೀಡುತ್ತಿದ್ದಾರೆ. ಇದು ಶ್ರೀಮಠವು ಕೊಡುವ ರಾಜ್ಯಮಟ್ಟದ ಅತ್ಯುನ್ನತ ಪ್ರಶಸ್ತಿ. ಒಂದು ಲಕ್ಷ ರೂಪಾಯಿ ನಗದು, ಒಂದು ತೊಲ ಚಿನ್ನದ ಪದಕವನ್ನೊಳಗೊಂಡಿದೆ. ಸಂಗೀತ ಕ್ಷೇತ್ರದಲ್ಲಿ ಸಾಧನೆ ಮಾಡಿದವರಿಗೆ ೨೦೧೮ ರಿಂದ "ಕಲ್ಯಾಣ ಕರ್ನಾಟಕ ಸಂಗೀತ ರತ್ನ" ಪ್ರಶಸ್ತಿ ನೀಡುತ್ತಿದ್ದಾರೆ. ಪೂರ್ವಾಶ್ರಮದ ಶ್ರೀಗಳ ತಂದೆಯವರಾದ ವೇ.ಶ್ರೀ. ಕರಬಸಯ್ಯಾ ಸ್ವಾಮಿ ಹಿರೇಮಠ ಅವರ ಸ್ಮರಣಾರ್ಥ ೧೦ ಸಾವಿರ ನಗದು, ಪ್ರಶಸ್ತಿಫಲಕ ನೀಡಿ ಗೌರವಿಸಿದರೆ, ಚಿಂಚೋಳಿ ಶಾಖಾ ಮಠದಿಂದ ಯುವ ಲೇಖಕರಿಗೆ "ಚೆನ್ನಶ್ರೀ ಪ್ರಶಸ್ತಿ" ೫ ಗ್ರಾಂ. ಚಿನ್ನ, ಪ್ರಶಸ್ತಿಫಲಕವನ್ನು ನೀಡಿ ಗೌರವಿಸುತ್ತಿದ್ದಾರೆ. ಅಷ್ಟೇ ಅಲ್ಲದೆ, ೨೦೨೦ ರಿಂದ ಶಿಕ್ಷಣಕ್ಷೇತ್ರದಲ್ಲಿ ಸಾಧನೆ ಮಾಡಿದವರಿಗೆ "ಕಲ್ಯಾಣ ಕರ್ನಾಟಕ ಶಿಕ್ಷಕರತ್ನ ಪ್ರಶಸ್ತಿ" ಮತ್ತು ಭಜನಾ ಸಂಘ - ಸಂಸ್ಥೆಗಳಿಗೆ "ಭಜನ ಸೇವಾ ರತ್ನ" ಪ್ರಶಸ್ತಿ ನೀಡಿ ಗೌರವಿಸುತ್ತಾರೆ, ಶ್ರೀಗಳವರ ಹುಟ್ಟುಹಬ್ಬದ ಪ್ರಯುಕ್ತ ವಿವಿಧ ಕ್ಷೇತ್ರದಲ್ಲಿ ವಿಶೇಷ ಸಾಧನೆ ಮಾಡಿದವರಿಗೆ "ಶ್ರೀ ಚೆನ್ನರತ್ನ ಪ್ರಶಸ್ತಿ" ನೀಡುತ್ತಿದ್ದಾರೆ. ಪ್ರತಿವರ್ಷ ಹಾರಕೂಡ ಜಾತ್ರೆಯ ಕೊನೆಯ ದಿನದಂದು ಉತ್ತಮ ಜೋಡೆತ್ತು ಪ್ರದರ್ಶನ ಮಾಡಿದ ರೈತರಿಗೆ ಒಂದು ತೊಲ ಚಿನ್ನ ಉಡುಗೊರೆ ನೀಡುತ್ತಾರೆ. ಇವರ ಕಾರ್ಯಸಾಧನೆಯನ್ನು ಮೆಚ್ಚಿ ಗುಲ್ಬರ್ಗಾ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ನೀಡಿ ಸನ್ಮಾನಿಸಿದೆ. ಕರ್ನಾಟಕ ಸರಕಾರ ೨೦೧೯ ರಲ್ಲಿ "ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ" ನೀಡಿ ಗೌರವಿಸಿದೆ. ಅಪಾರ ಭಕ್ತವರ್ಗವನ್ನು ಹೊಂದಿದ ಇವರಿಗೆ ಗದಲೇಗಾಂವ, ಸೇಡಂ, ಬಸವಕಲ್ಯಾಣದಲ್ಲಿ ಸಾರ್ವಜನಿಕವಾಗಿ ಹುಟ್ಟುಹಬ್ಬ ಆಚರಿಸಿ ಚಿನ್ನದ ಕಿರೀಟ ತೊಡಿಸಿ ಆನಂದಿಸಿ, ಗೌರವಿಸಿದ್ದಾರೆ. ಬಾಳೆಹೊನ್ನೂರಿನ ಜಗದ್ಗುರು ರಂಭಾಪುರಿ ಶ್ರೀಗಳು "ಶಿವಾಚಾರ್ಯ ರತ್ನ" ಪ್ರಶಸ್ತಿ ನೀಡಿ ಗೌರವಿಸಿದರೆ, ಉತ್ತರ ಪ್ರದೇಶದ ಕಾಶಿ ಜಗದ್ಗುರು ಪೀಠದಿಂದ "ಧರ್ಮರತ್ನ ಪ್ರಶಸ್ತಿ" ಲಭಿಸಿದೆ. ಉಜ್ಜಯಿನಿ ಪೀಠದಿಂದ "ಸದ್ಧರ್ಮ ಶಿಖಾಮಣಿ" ಪ್ರಶಸ್ತಿ, ಕಮಲಾಪೂರದಿಂದ "ಮನುಕುಲ ರತ್ನ" ಪ್ರಶಸ್ತಿ, ಕಲಬುರಗಿಯಿಂದ "ದಾಸೋಹ ಜ್ಞಾನರತ್ನ" ಪ್ರಶಸ್ತಿ, ಹುಲಸೂರಿನಿಂದ "ಕಲ್ಯಾಣಕರ್ನಾಟಕ ರತ್ನ" ಪ್ರಶಸ್ತಿ, ಎನ್.ಆರ್.ಜಿ. ಫೌಂಡೇಷನ್ ವತಿಯಿಂದ "ಕಲ್ಯಾಣ ಕರ್ನಾಟಕ ಅಧ್ಯಾತ್ಮಸಿರಿ" ಪ್ರಶಸ್ತಿ, ಮುಂಡರಗಿಯ ಜಗದ್ಗುರು ಅನ್ನದಾನೇಶ್ವರ ಪ್ರತಿಷ್ಠಾನದ ಪ್ರಶಸ್ತಿ, ಕಲಬುರಗಿಯ ಸ್ವರಮಾಧುರಿ ಸಂಗೀತ ವಿದ್ಯಾಲಯದಿಂದ "ಸ್ವರಮಾಧುರಿ ಪ್ರಶಸ್ತಿ" ಸೇರಿದಂತೆ ಹಲವಾರು ಪ್ರಶಸ್ತಿ, ಪುರಸ್ಕಾರಗಳು ಪಡೆದು ಖ್ಯಾತರಾಗಿದ್ದಾರೆ. ೨೦೦೫ರಲ್ಲಿ ಇವರ ದಿವ್ಯ ಸಾನ್ನಿಧ್ಯದೊಂದಿಗೆ ಹಾರಕೂಡ

ಸಂಸ್ಥಾನ ಮಠದ ಆವರಣದಲ್ಲಿ ೭ನೇ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನವು ಅದ್ದೂರಿಯಾಗಿ ನಡೆಯಿತು. ಪೂಜ್ಯರ ಮಾರ್ಗದರ್ಶನ ಹಾಗೂ ಅವರ ಶಿಕ್ಷಣ ಸಂಸ್ಥೆಯ ಆವರಣದಲ್ಲಿ ೨೦೧೮ರಲ್ಲಿ ಚಿಂಚೋಳಿಯಲ್ಲಿ ಡಾ. ವೀರಣ್ಣ ದಂಡೆಯವರ ಅಧ್ಯಕ್ಷತೆಯಲ್ಲಿ ಕಲಬುರಗಿ ಜಿಲ್ಲಾ ಹದಿನಾರನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಸಂಭ್ರಮ, ಸಡಗರದಿಂದ ನಡೆದಿದೆ.

ಇವರ ಕುರಿತು ಮುಸ್ಲಿಂ ಸಾಹಿತಿಗಳಾದ ಹುಸೇನ್ ಸಾಬ ಮಾಸ್ತರ್, ಕೊಹಿನೂರಿನ ಮಲಂಗ ಶಾ ಬಾಬಾ, ರಸೂಲ್ ಸಾಬ್ ಬಾಬಾ, ಲಾಲ ಮಹಮ್ಮದ್ ಶಾ, ನಬಿಲಾಲ, ಎಲ್.ಬಿ.ಕೆ. ಅಲ್ದಾಳ ಮುಂತಾದವರು ಭಕ್ತಿಯಿಂದ ಸಾಹಿತ್ಯ ರಚಿಸಿದ್ದಾರೆ, ಮಚ್ಚೇಂದ್ರ ಪಿ. ಅಣಕಲ್ ಅವರು "ಹರಹರಾ ಹಾರಕೂಡೇಶ್ವರ" ಎಂಬ ಅಂಕಿತ ನಾಮದಿಂದ ನೂರಾರು ಅಧುನಿಕ ವಚನಗಳನ್ನು ಬರೆದಿದ್ದರೆ ಡಾ. ಶಿವಶರಣಯ್ಯ ಎಂ. ಮಠಪತಿಯವರು ಹಾರಕೂಡಾಧೀಶ ಶ್ರೀ ಚನ್ನವೀರಪ್ರಿಯ ಚನ್ನಬಸವೇಶ್ವರ" ಎಂಬ ಅಂಕಿತದಿಂದ ಹಲವಾರು ವಚನಗಳನ್ನು ಬರೆದು ಪುಸ್ತಕ ಪ್ರಕಟಿಸಿದ್ದಾರೆ. ಇವರ ೫೭ನೇ ಹುಟ್ಟು ಹಬ್ಬದ ನಿಮಿತ್ತವಾಗಿ ಪತ್ರಕರ್ತ ಸಾಹಿತಿ ಮಾಣಿಕ ಆರ್. ಭುರೆಯವರು "ನುಡಿಚೆನ್ನ" ಎಂಬ ಅಭಿನಂದನಾ ಗ್ರಂಥವನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಶ್ರೀಮಠವು ಸರ್ವಧರ್ಮ ಸಮಾನತೆಯ ಭಾವೈಕ್ಯತದ ಕೇಂದ್ರವಾಗಿದೆ, ಸಾಮರಸ್ಯದ ನೆಲೆಬೀಡಾಗಿದೆ.



ಎನ್ನ ಕಷ್ಟಕುಲದಲ್ಲಿ ಹುಟ್ಟಿದೆನೆಂಬ ಕರ್ಮವ ಕಳೆದು
ಮುಟ್ಟಿ ಪಾವನವ ಮಾಡಿ
ಕೊಟ್ಟನಯ್ಯಾ ಎನ್ನ ಕರಸ್ಥಲಕ್ಕೆ ಲಿಂಗವ!
ಆ ಲಿಂಗ ಬಂದು ಸೋಂಕಲೊಡನೆ
ಎನ್ನ ಸರ್ವಾಂಗದ ಅವಲೋಹವಳಿಯಿತ್ತಯ್ಯಾ!
ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ
ಎನ್ನ ಮನದಲ್ಲಿ ಜಂಗಮವ ನೆಲೆಗೊಳಿಸಿದ
ಎನ್ನ ಅರುಹಿನಲ್ಲಿ ಪ್ರಸಾದವ ನೆಲೆಗೊಳಿಸಿದ!
ಇಂತೀ ತ್ರಿವಿಧಸ್ಥಾನವ ಶುದ್ಧವ ಮಾಡಿ
ಚತುರ್ವಿಧ ಸಾರಾಯಸ್ಥಲವ ಸಂಬಂಧವ ಮಾಡಿದ
ಸಂಗನಬಸವಣ್ಣನ ಕರುಣದಿಂದ
ಪ್ರಭುದೇವರ ಶ್ರೀಪಾದವ ಕಂಡು ಬದುಕಿದೆನು ಕಾಣಾ!
ಅಭಿನವ ಮಲ್ಲಿಕಾರ್ಜುನಾ.

– ಡೋಹರ ಕಕ್ಕಯ್ಯ





## ಅನ್ನದಾತನಿಗೇ... ಅನ್ನದ ಕೊರತೆಯಾದರೆ ಹೇಗೆ?

**ಈರಪ್ಪ ಜಾಲಿಕಟ್ಟಿ**

**ಒಕ್ಕಲನು ನಲುಗಿಸದೆ ಲೆಕ್ಕವನು ಸಿಕ್ಕಿಸದೆ ।**
**ಕಕ್ಕುಲತೆಯಿಂದ ನಡಿಸುವಾ ಅರಸನು ।**
**ಚಕ್ಕಂದವಿರುವ ಸರ್ವಜ್ಞ**

ಶತ ಶತಮಾನಗಳ ಹಿಂದೆಯೇ ಸರ್ವಜ್ಞ ಕವಿಯು ಕೃಷಿ ಮತ್ತು ಕೃಷಿಕರ ಮಹತ್ವವನ್ನು ತನ್ನ ತ್ರಿಪದಿಗಳಲ್ಲಿ ಹಾಡಿ ಹೊಗಳಿ ನಾಡಿನಲ್ಲಿ ರೈತರಿಗೆ ಕೊಡಬೇಕಾದ ಮೊದಲ ಪ್ರಾಶಸ್ತ್ಯವನ್ನು ತಿಳಿಹೇಳಿದ್ದಾನೆ. ಅಲ್ಲದೆ, ತನ್ನ ಮತ್ತೊಂದು ತ್ರಿಪದಿಯಲ್ಲಿ 'ಮಂಡಲವನಾಳಿ ಮೆರೆವರೆ ಒಕ್ಕಲನು ಕೊಂಡಾಡಬೇಕು' ಎಂದು ಆಳುವ ವ್ಯವಸ್ಥೆಯನ್ನು ಎಚ್ಚರಿಸಿದ್ದಾನೆ. ಮೇಲಿನ ತ್ರಿಪದಿಯಂತೆ ಯಾವ ರಾಜನು ತನ್ನ ರಾಜ್ಯದ ರೈತರನ್ನು ಕಷ್ಟಕ್ಕೆ ಗುರಿಮಾಡದೆ ಆತನಿಂದ ಅನ್ಯಾಯವಾಗಿ ಹೆಚ್ಚಿನ ಕಂದಾಯ ತೆಗೆದುಕೊಳ್ಳದೆ, ರೈತರನ್ನು ಸ್ವಂತ ಮಕ್ಕಳಂತೆ ಕಾಣುತ್ತಾನೆಯೋ ಅಂತಹ ರಾಜನನ್ನು ಹೇರಳವಾದ ದ್ರವ್ಯವೂ, ಕೀರ್ತಿಯೂ ಬಂದು ಅಪ್ಪುತ್ತದೆ. ರಾಜ್ಯವು ಸುಖ-ಶಾಂತಿಯಿಂದ ತುಂಬುತ್ತದೆ. ಹಾಗಾಗಿ ಕೃಷಿಕರಿಗೆ ದೇಶದಲ್ಲಿ ಮೊದಲ ಸ್ಥಾನ ಕೊಡಬೇಕೆಂದಿದ್ದಾನೆ. ಆದರೆ, ಪ್ರಸ್ತುತ ದಿನಮಾನಗಳಲ್ಲಿ ಇದಕ್ಕೆ ವ್ಯತಿರಿಕ್ತವಾದ ಪರಿಸ್ಥಿತಿ ತಲೆದೋರುತ್ತಿರುವುದು ವಿಷಾದದ ಸಂಗತಿ.

ಭಾರತ ಕೃಷಿಪ್ರಧಾನವಾದ ರಾಷ್ಟ್ರ. ದೇಶದ ಆರ್ಥಿಕತೆ ಬಲಗೊಳ್ಳಲು ಕೃಷಿಯೇ ಮೂಲ. ಆದರೆ, ಬದಲಾದ ಪರಿಸ್ಥಿತಿಯಲ್ಲಿ ರೈತನ ಸ್ಥಿತಿ-ಗತಿ ಹೇಗಿದೆ? ದೇಶದಲ್ಲಿ ಆಹಾರಭದ್ರತೆ ಇಲ್ಲದಿದ್ದರೆ ಏನಾಗುತ್ತದೆ ಎಂಬ ವಿಷಯವನ್ನು ಕುರಿತು ಪ್ರತಿಯೊಬ್ಬರೂ ಆತ್ಮಾವಲೋಕನ ಮಾಡಿಕೊಳ್ಳಬೇಕು. ಕೃಷಿಕ ಮತ್ತು ಕೃಷಿ ಕಾಯಕವೆಂದರೆ ತುಚ್ಛ ಭಾವನೆಯಿಂದ ನೋಡುವ ವಾತಾವರಣ ನಿರ್ಮಾಣವಾಗಿದೆ. ಅಲ್ಲದೆ, ಸರ್ಕಾರದ ಯೋಜನೆಯ ಹಣ ಸಿಗುತ್ತದೆಂದರೆ ಕೃಷಿ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಳ್ಳದೆ, ತಾವೂ ರೈತರೆಂದು ಹೇಳಿಕೊಳ್ಳುವವರೂ ಇದ್ದಾರೆ! ಆದರೆ, ನಿಜವಾದ ರೈತ ಯಾವುದೋ ಪ್ರದೇಶದಲ್ಲಿ ವಾಸವಿದ್ದು, ಬಿಸಿಲು ಮಳೆಗಳಿಗೆ ಮೈಯೊಡ್ಡಿ ಯಾವುದೇ ಸುಖವನ್ನು ಅಪೇಕ್ಷಿಸದೆ ಹೊಲ ಗದ್ದಲಗಳಲ್ಲಿ ಕಾಯಕ ಮಾಡುತ್ತಿದ್ದಾನೆ. ಅಂತೆಯೇ ರೈತನನ್ನು ಕುವೆಂಪು ಅವರು 'ನೇಗಿಲ ಯೋಗಿ' ಎಂದು ಕರೆದು ಗೌರವಿಸಿದರು. ಇಂತಹ ಶುದ್ಧಕಾಯಕದ ನೇಗಿಲ ಯೋಗಿಯನ್ನು

ಗುಂಡ್ಲೂರ್ ಚಾಳ, ೨ನೇ ಅಡ್ಡರಸ್ತೆ, ಬೈಲಹೊಂಗಲ-೫೯೧೧೦೨ ಬೆಳಗಾವಿ ಮೊ: ೯೦೩೫೬೨೭೮೦೮

ಕಡೆಗಣಿಸಿ ನಡೆವ ಭೋಗಿಗಳೇ ಇಂದು ಹೆಚ್ಚಾಗಿದ್ದಾರೆ. ಪರಿಣಾಮ, ರೈತ ಬೆಳೆದ ಬೆಳೆಗಷ್ಟೇ ಅಲ್ಲ, ರೈತಕುಲಕ್ಕೇ ಬೆಲೆ ಇಲ್ಲದಾಗುತ್ತಿದೆ.

ಅಮೇರಿಕದಂತಹ ದೇಶಗಳಲ್ಲಿ ರೈತರು ತಾವು ಬೆಳೆದ ಬೆಳೆಗಳಿಗೆ ತಾವೇ ಬೆಲೆ ನಿಗದಿಪಡಿಸುವ ವ್ಯವಸ್ಥೆಯಿದೆ. ಅಲ್ಲಿ ಮಧ್ಯವರ್ತಿಗಳ ಹಾವಳಿಯೇ ಇಲ್ಲ. ಭಾರತದಲ್ಲಿ ಮಾತ್ರ ರೈತ ಬದುಕಿನುದ್ದಕ್ಕೂ ತಾನು ಬಿತ್ತಿ ಬೆಳೆದ ಬೆಳೆಗೆ ಬೆಂಬಲ ಬೆಲೆಗಾಗಿಯೇ ಕಾದು ಕುಳಿತು ಕೊನೆಗೆ ಬೆಳೆದ ಫಸಲನ್ನು ಬೀದಿಗೆಸೆಯುವ ಅವ್ಯವಸ್ಥೆ ಇದೆ. ಅಮೆರಿಕದಲ್ಲಿ ಕೃಷಿ ಕಾಯಕಕ್ಕೆ ಮತ್ತು ಕೃಷಿಕರಿಗೆ ಮಹತ್ವವಿದೆ, ಅಲ್ಲಿನ ಸರ್ಕಾರಗಳ ಸಹಕಾರವಿದೆ. ಇದಕ್ಕೊಂದು ಉತ್ತಮ ಉದಾಹರಣೆ ಎಂದರೆ, ಅಮೆರಿಕದಲ್ಲಿ ನಡೆದ ಒಂದು ಘಟನೆ ನೆನಪಾಗುತ್ತದೆ. ಅತಿ ಸರಳತೆಯ ದಕ್ಷ ರಾಜಕಾರಣಿ ಥಾಮಸ್ ಜೆಫರ್‌ಸನ್ ಎಂಬ ರಾಷ್ಟ್ರಾಧ್ಯಕ್ಷರು, ರೈತರ ಕುರಿತಾಗಿ ಹೊಂದಿದ್ದ ಕಾಳಜಿ ಎಂತಹದಿತ್ತೆಂದರೆ, ಅವರೊಮ್ಮೆ ಅಮೇರಿಕಾದ ನಗರವೊಂದಕ್ಕೆ ಪ್ರವಾಸ ತೆರಳಿದ್ದರು. ಅಲ್ಲಿನ ನಿರಂತರ ಕೆಲಸ, ಓಡಾಟದಿಂದ ದಣಿದು ವಿಶ್ರಾಂತಿಗಾಗಿ ಆ ನಗರದ ದೊಡ್ಡ ಹೊಟೇಲ್ ಒಂದಕ್ಕೆ ಸಾಮಾನ್ಯ ವೇಷಧಾರಿಯಾಗಿ ಹೋಗುತ್ತಾರೆ. ಅಲ್ಲಿದ್ದ ವ್ಯವಸ್ಥಾಪಕನನ್ನು ಕಂಡು 'ನನಗೆ ವಿಶ್ರಾಂತಿಗಾಗಿ ಒಂದು ರೂಮ್ ಸಿಗುತ್ತದೆಯೇ?' ಎಂದು ಕೇಳಿದರಂತೆ. ಅವರ ಸಾಧಾರಣ ವೇಷಭೂಷಣ ನೋಡಿ ವ್ಯವಸ್ಥಾಪಕ 'ನಿಮ್ಮಂಥ ರೈತಾಪಿಗಳಿಗೆಲ್ಲ ಇಂತಹ ಹೊಟೇಲು ಬೇಕಿಲ್ಲ, ಯಾವುದಾದರೊಂದು ಚರ್ಚಿನ ಮೂಲೆಯಲ್ಲಿ ಮಲಗಿ ಹೋಗಿ' ಎಂದು ಜವಾಬು ನೀಡಿದನಂತೆ.

ಈ ಮಾತನ್ನು ಕೇಳಿದ ಥಾಮಸ್ ಜೆಫರ್‌ಸನ್ ಏನೂ ಮಾತನಾಡದೆ ಅಲ್ಲಿಂದ ನಿರ್ಗಮಿಸುತ್ತಾರೆ. ಅನಂತರ ಆ ಹೊಟೇಲ್‌ನ ವ್ಯವಸ್ಥಾಪಕನಿಗೆ ಈದೀಗ ಬಂದಿದ್ದವರು ರಾಷ್ಟ್ರಾಧ್ಯಕ್ಷರೆಂದು ತಿಳಿದು ಗಾಬರಿಯಾಗುತ್ತದೆ. ತಕ್ಷಣ ಆತ ದೂರದಲ್ಲಿ ಹೋಗುತ್ತಿದ್ದ ಥಾಮಸ್ ಅವರ ಬಳಿ ಓಡಿಹೋಗಿ 'ನನ್ನದು ತಪ್ಪಾಗಿದೆ, ರೂಮ್ ವ್ಯವಸ್ಥೆ ಮಾಡಿಕೊಡುತ್ತೇನೆ, ದಯವಿಟ್ಟು ಬನ್ನಿ' ಎಂದು ಅಂಗಲಾಚುತ್ತಾನೆ. ಇದಕ್ಕೆ ಥಾಮಸ್ ಅವರು, 'ಯಾವ ಹೊಟೇಲಿನಲ್ಲಿ ರೈತನಿಗೆ ಜಾಗವಿಲ್ಲವೋ ಅಂತಹ ಸ್ಥಳದಲ್ಲಿ ರಾಷ್ಟ್ರಾಧ್ಯಕ್ಷನಿಗೂ ಇರಲಿಕ್ಕಾಗುವುದಿಲ್ಲ' ಎಂದು ಹೊರಟುಹೋದರಂತೆ. ಈ ಘಟನೆ ದೊಡ್ಡ ಸುದ್ದಿಯಾಗಿ ರೈತರ ಘನತೆ ಗೌರವ ಹೆಚ್ಚಾಯಿತಂತೆ.

ಆದರೆ ಭಾರತದಲ್ಲಿ ರೈತರ ಕಾಳಜಿ ಬೃಹತ್ ವೇದಿಕೆಗಳ ಭಾಷಣಗಳಿಗೆ ಸೀಮಿತವಾಗಿದ್ದು ರೈತನ ಉತ್ಪನ್ನಗಳಿಗೆ ಹಾದಿ ಬೀದಿಯೇ ಗತಿಯಾಗಿದೆ. ಇದರಿಂದ ರೈತ ಕಂಗೆಟ್ಟು ಸಾಲದ ಶೂಲಕ್ಕೆ ಗುರಿಯಾಗಿ ಕೊನೆಗೆ ಆತ್ಮಹತ್ಯೆಗೂ ಶರಣಾಗುತ್ತಿದ್ದಾನೆ. ದೇಶದಲ್ಲಿ ಯಾರೇ ಅಧಿಕಾರಕ್ಕೆ ಬಂದರೂ ರೈತ ಮಾತ್ರ ರಾಗಿ ಬೀಸುವುದು ತಪ್ಪಿಯೇ ಇಲ್ಲ. ರೈತರಿಗಾಗಿ ಸಬ್ಸಿಡಿ, ವಿಮೆ ಸೌಲಭ್ಯ, ಸಾಲ ಮನ್ನಾದಂತಹ ಯೋಜನೆಗಳು ಜಾರಿಯಲ್ಲಿದ್ದರೂ ರೈತನ ಪ್ರಾಣಹಾನಿ ಮಾತ್ರ ನಿಲ್ಲುತ್ತಿಲ್ಲ. ಇದಕ್ಕೆ ಮುಖ್ಯ ಕಾರಣ ದೇಶ ಆಳುವವರು ತನ್ನ ಬೆನ್ನಿಗೆ ನಿಂತಿಲ್ಲ ಎಂಬ ಅನಾಥಪ್ರಜ್ಞೆ ರೈತಸಮುದಾಯವನ್ನು ಕಾಡುತ್ತಿದೆ. ಹೆಸರಿಗೆ ಮಾತ್ರ





ರೈತ ದೇಶದ ಬೆನ್ನೆಲುಬು, ಮನ್ನಣೆಗೆ ಮಾತ್ರ ಇಲ್ಲವೆಂಬಂತಾಗಿದೆ.

ಹೊಲಗದ್ದೆಯ ಕೆಸರಿನಲ್ಲಿ ದುಡಿಯುವುದು ರೈತನ ಕರ್ಮ. ಅವನು ಬೆಳೆದದ್ದನ್ನು ನಾವು ಹಣ ಕೊಟ್ಟು ತಿನ್ನುತ್ತೇವೆ. ನಮಗೂ ರೈತರಿಗೂ ಸಂಬಂಧವೇ ಇಲ್ಲ ಎಂದುಕೊಂಡಿದ್ದರ ಪರಿಣಾಮ ಇಂದು ಆಹಾರಧಾನ್ಯಗಳ ಕೊರತೆಗೆ ಕಾರಣವಾಗುತ್ತಿದೆ. ಅಲ್ಲದೆ, ಕಳಪೆ ಬೀಜ, ದುಬಾರಿ ಗೊಬ್ಬರ, ಕಾಲಕಾಲಕ್ಕೆ ಬರದ ಮಳೆ, ಕ್ರಿಮಿಕೀಟಗಳ ಹಾವಳಿ ಇವೆಲ್ಲವುಗಳನ್ನೂ ಹೇಗೋ ನಿಭಾಯಿಸಿಕೊಂಡು ರೈತ ಉತ್ತಮ ಬೆಳೆ ತೆಗೆದರೂ ಬೆಲೆಯಂತೂ ಸಿಗುವುದಿಲ್ಲ. ಬೆಲೆ ಬರುವವರೆಗೂ ಫಸಲು ಹಾಳಾಗದಂತೆ ಸಂಗ್ರಹಿಸಿಡಲು ಸೂಕ್ತ ದಾಸ್ತಾನು ವ್ಯವಸ್ಥೆಯೂ ಇಲ್ಲ. ಹೀಗೆ ಕಷ್ಟಗಳಲ್ಲಿಯೇ ವ್ಯವಸಾಯಗಾರನ ಬದುಕು ವ್ಯಯಿಸಿ ಸಾಯುವಂತಾಗಿದೆ. 'ಒಕ್ಕಲಿಗ ಒಕ್ಕದಿದ್ದರೆ ಜಗವೆಲ್ಲ ಬಿಕ್ಕುವುದು' ಎಂಬ ಸರ್ವಜ್ಞನ ಮಾತಿನಂತೆ ಇಂದು ನಾವೆಲ್ಲರೂ ನಿಶ್ಚಿಂತೆಯಿಂದ ಎರಡು ಹೊತ್ತು ಊಟ ಮಾಡಿ ನೆಮ್ಮದಿಯಿಂದ ನಿದ್ದೆ ಮಾಡುತ್ತಿದ್ದೇವೆಂದರೆ, ಇದಕ್ಕೆ ರೈತನ ಶ್ರಮದ ದುಡಿಮೆಯೇ ಕಾರಣ. ದೇಶದ ಅನ್ನದಾತನ ಕುಟುಂಬಕ್ಕೇ ತುತ್ತು ಅನ್ನವಿಲ್ಲದ ಪರಿಸ್ಥಿತಿ ಇದೆ. ನಮ್ಮೆಲ್ಲರಿಗೂ ಡಾಕ್ಟರ್, ಲಾಯರ್, ಇಂಜನೀಯರ್‌ಗಳು ಮಾತ್ರ ಮುಖ್ಯ ಎನಿಸುತ್ತಾರೆ. ಆದರೆ, ದೇಶದ ಹಸಿವನ್ನು ನೀಗಿಸುತ್ತಿರುವ ರೈತರ ನೆನಪು ಮಾತ್ರ ನಮ್ಮಿಂದ ಮರೆಯಾಗುತ್ತದೆ. ಡಾಕ್ಟರ್, ಲಾಯರ್, ಇಂಜನೀಯರ್‌ಗಳಿಲ್ಲದೇ ಹೇಗೋ ಬದುಕಬಹುದು ಆದರೆ, ಬೆವರು ಸುರಿಸಿ, ನೆಲ ಹದಗೊಳಿಸಿ ಉತ್ತುವ ಬಿತ್ತುವ ರೈತರಿಲ್ಲವೆಂದರೆ ಜೀವರಾಶಿಗೆ ಎಲ್ಲಿಯ ನೆಲೆ? ಆದ್ದರಿಂದ ರೈತರನ್ನು ದೇಶದ ಸರ್ಕಾರವಾಗಲೀ, ಜನತೆಯಾಗಲೀ ಕಡೆಗಣಿಸಿದರೆ ನಾವು ಉಣ್ಣುವ ತುತ್ತಿಗೆ ನಾವೇ ಕುತ್ತು ತಂದುಕೊಂಡಾಗುತ್ತದೆ. ಇದನ್ನರಿತು ಎಲ್ಲರೂ ರೈತನಿಗೆ ಕೃತಜ್ಞರಾಗಿದ್ದು, ಅಭಿಮಾನ ತಳೆದು ಸಹಕಾರ ನೀಡಿದರೆ ದೇಶದಲ್ಲಿ ಆಹಾರ ಕೊರತೆ ನೀಗಿ ನೆಮ್ಮದಿ ನೆಲೆಗೊಳ್ಳುತ್ತದೆ.

□

ಶರಣಾರ್ಥಿ ಶರಣಾರ್ಥಿ ಎಲೆ ನಮ್ಮವ್ವ,
ಶರಣಾರ್ಥಿ ಶರಣಾರ್ಥಿ ಕರುಣಸಾಗರ ನಿಧಿಯೆ,
ದಯಾಮೂರ್ತಿ ತಾಯೆ, ಶರಣಾರ್ಥಿ!
ಮಹಾಲಿಂಗ ತ್ರಿಪುರಾಂತಕನೊಡ್ಡಿದ ತೊಡಕು,
ನೀವು ಬಿಡಿಸಿದರಾಗಿ ನಿಮ್ಮ ದಯದಿಂದ
ನಾನು ಹುಲಿ ನೆಕ್ಕಿ ಬದುಕಿದೆನು ಶರಣಾರ್ಥಿ ಶರಣಾರ್ಥಿ ತಾಯೆ.

– ಕಿನ್ನರಿ ಬ್ರಹ್ಮಯ್ಯ

**ನಿರ್ವಚನ ೩೮**

# ಅಕ್ಕನ ವಚನಗಳ ನಿರ್ವಚನ

ಬಿದರಹಳ್ಳಿ ನರಸಿಂಹಮೂರ್ತಿ

**ಬಿಟ್ಟೆನೆಂದಡೆ ಬಿಡದೀ ಮಾಯೆ**
**ಬಿಡದಿದ್ದಡೆ ಬೆಂಬತ್ತಿತ್ತು ಮಾಯೆ**
**ಯೋಗಿಗೆ ಯೋಗಿಣಿಯಾಯಿತ್ತು ಮಾಯೆ**
**ಸವಣಂಗೆ ಸವಣಿಯಾಯಿತ್ತು ಮಾಯೆ**
**ಯತಿಗೆ ಪರಾಕಿಯಾಯಿತ್ತು ಮಾಯೆ**
**ನಿನ್ನ ಮಾಯೆಗೆ ನಾನಂಜುವವಳಲ್ಲ**
**ಚೆನ್ನಮಲ್ಲಿಕಾರ್ಜುನದೇವಾ, ನಿಮ್ಮಾಣೆ** (ಸ.ವ.ಸಂ.೫, ೧೯೯೩, ವ.೨೫೦, ಪು.೭೭)

ಉಡುತಡಿಯ ಹುಟ್ಟುಮನೆ ಬಿಟ್ಟು, ಕಲ್ಯಾಣದ ಮಹಾಮನೆ ಹೊಕ್ಕು ಹೊರಟು ಜೀವನಾನುಭವ ಮಡುಗಟ್ಟಿದ ನಂತರವೇ ಹೊಮ್ಮಿದ ಅನುಭವಸ್ಥ ಅಕ್ಕನ ನುಡಿಯಿದು. ಈ ಅಧಿಕೃತ ಪಠ್ಯಕಿಂತ ಬಿಟ್ಟೇನೆಂದರೂ...\ ಬಿಡದಿದ್ದರೆ...ಎಂಬ ಶಬ್ದಗಳ ಪಾಠಾಂತರವೆ ಹೆಚ್ಚು ಪ್ರಚಲಿತವೆ? ಮೊದಲ ಐದು ಸಾಲುಗಳ ಅಂತ್ಯಪ್ರಾಸದ ಮಾಯೆ ಬದುಕು ಒಡ್ಡುವ ಸವಾಲಿನಂತಿದ್ದರೆ ಆರನೇ ಸಾಲಿನಲ್ಲಿ ಅದೇ ಪದ ಜವಾಬಿಕ್ಕಲು ಬಳಕೆಯಾಗಿದೆ. ಮಾಯೆ ಬೆಂಬಿಡದೆ ಕಾಡುವ ಭೂತ; ಭಿನ್ನ ಭಿನ್ನ ಬುದ್ಧಿ, ಚಂಚಲ ಚಿತ್ತ, ದ್ವಂದ್ವಭಾವ, ಉಭಯ ಸಂಕಟ. ಎಂಥೆಂಥ ಸಾಧಕರನ್ನೂ ಅವರಿಗೆ ಆಪ್ತವಾದ ವೇಷ ತೊಟ್ಟು ಆಡಿಸುತ್ತ ಬೇಸ್ತು ಬೀಳಿಸಿ ಹುಡಿಗುಟ್ಟುತ್ತೆ. ಆದರೆ ಅಕ್ಕ ಅಂಥ ವಿಶ್ವಮಾಯೆಗೂ ಬೆಚ್ಚದ ಬೆದರದ ಅಪ್ಪಟ ಸಾಧಕಿ, ಎಂಟೆದೆಯ ಕೆಚ್ಚುಳ್ಳ ಕನ್ನಡಿತಿ. ಇದೇ ಕನ್ನಡ ಸಂಸ್ಕೃತಿ ಹಿರಿಮೆ, ಗರಿಮೆ. ಅವಳು ಆಣೆಯಿಡುತ್ತಿರುವುದು ತೆಲುಗು ಸೀಮೆಯಲ್ಲಿ ನೆಲೆಸಿರುವ ಚೆನ್ನಮಲ್ಲಿಕಾರ್ಜುನನ ಮೇಲೆ. ಸಕಲರಿಗೂ ಸಲ್ಲುವ ಇವ ಸರ್ವಭಾಷಾತೀತ ಸರ್ವದೇಶಾತೀತ ವಿಶ್ವೋದೇವ ಎಂಬುದೆ ಇಲ್ಲಿನ ಆಧಿಭೌತಿಕ–ಆಧಿದೈವಿಕ ವೈರುಧ್ಯಾನುಭವ (ಮಿಸ್ಟಿಕ್ ಪ್ಯಾರಡಾಕ್ಸ್). ಅನುಭಾವಿಯಷ್ಟೇ ಅಂಗೈಯಲ್ಲಿ ಹಿಡಿಯಬಲ್ಲ ಅರಿವಿನ ಕೆಂಡ ಅರ್ಥಾತ್ ಅಖಂಡ ಸತ್ಯ ಇದು!

ಎನ್ನ ಮಾಯದ ಮದವ ಮುರಿಯಯ್ಯಾ ಎಂಬ ವಚನದಲ್ಲಿ ಅಕ್ಕ ಸುತ್ತಮುತ್ತಲೂ ಕೆಡವಿಕೊಳ್ಳುವ ಹುನ್ನಾರದಲ್ಲಿರುವ ಮದಭರಿತ ಮಿಥ್ಯಾಪ್ರಪಂಚದಿಂದ ತನ್ನನ್ನ ಬಿಡಿಸಿಕೊಳ್ಳಬಲ್ಲ ಸರ್ವಶಕ್ತ ಚೆನ್ನಮಲ್ಲಿಕಾರ್ಜುನಗೆ ಮೊರೆಯಿಟ್ಟಿರುವುದು ಬ್ರಹ್ಮ ಒಂದೇ ಸತ್ಯ, ಮಿಕ್ಕ ಜಗತ್ತೆಲ್ಲ ಮಿಥ್ಯ ಎಂಬ ಶಾಂಕರಾದ್ವೈತ\ಮಾಯಾವಾದ ಪ್ರತಿಫಲನವೆ? ಅಲ್ಲೂ ನಿಲ್ಲದೆ, ಈ

'ಅನಿಮಿಷ', ಕ್ರಾಸ್–7, ದುರ್ಗಿಗುಡಿ ಹಂತ 1, ಹೊನ್ನಾಳಿ – 577 217, ದಾವಣಗೆರೆ ಜಿಲ್ಲೆ
ಮೊ.ನಂ. 98801 30203



ಭೌತಜೀವಿತದ ಉಭಯಭಾವವಳಿಸಿ ನಿನ್ನೊಳಗೆ ನಿಜೈಕ್ಯಗೊಳಿಸಿಕೋ ಎಂದು ಸ್ವಾನುಭಾವ ಶಿಖರ ಏರುವುದೇ ಅವಳ ವಿಭಿನ್ನತೆ, ವೈಶಿಷ್ಟ್ಯ! ಮೇಲೆ ನಮೂದಿಸಿದ ವಚನ ಮಾಯಾಲಿಂಗನದ ಮಿಥ್ಯಾಸುಖದಲ್ಲಿ ಓಲಾಡುವವರನ್ನಷ್ಟೆ ಅಲ್ಲ, ಅದ ಬಿಟ್ಟುಹಾಕಿ ಅದರಿಂದ ಬಿಡಿಸಿಕೊಂಡಂತೆ ಬೀಗುವ ಹುಸಿ ಸಾಧಕರ ಹುಂಬ ನಂಬಿಕೆಯನ್ನೂ ಗೇಲಿ ಮಾಡುತ್ತದೆ. ಬಿಟ್ಟರೂ ಸರಿ, ಬಿಡದಿದ್ದರೂ ಸರಿ, ಒಟ್ಟಿನಲ್ಲಿ ಎಲ್ಲರನ್ನೂ ಸದಾ ಬೆಂಬಿಡದೆ ಕಾಡುತ್ತಲೇಯಿರುವ ಸಾರ್ವಕಾಲಿಕ ಅಸತ್ಯ ಈ ಮಾಯೆ. ಹುಟ್ಟಿನೀಚೆ ಸಾವಿನಾಚೆ ಅಸ್ತಿತ್ವದಲ್ಲಿರದ ಲಿಂಗವಿಭಿನ್ನತೆ, ಲೈಂಗಿಕ ವಿಕಾರ ಬದುಕಿನುದ್ದಕ್ಕೂ ಮಹಾನ್ ಋಷಿ ಮುನಿ ತಪಸ್ವಿ ವಿರಕ್ತ ಯತಿ ಯೋಗಿ ಶ್ರಾವಕ ಶರಣರನ್ನೆಲ್ಲ ಮರುಳು ಮಾಡಿ ಹೊಲಬುದಪ್ಪಿಸಿ ಹಾಳುಮಾಡಿದ್ದನ್ನು ನೆನಪಿಸಿ ಎಚ್ಚರಿಕೆ ಮುಳ್ಳಾಡಿಸುತ್ತದೆ ಈ ಹರಿತ ವಚನ.

ಮಾಯೆ ಎಂದರೇನು? ತಾನೆ ಕಟ್ಟಿಕೊಂಡ ಭ್ರಮೆಯೆ? ವಾಸ್ತವದ ಶತ್ರುವಾದ ಮರೀಚಿಕೆಯೆ? ಅಸ್ತಿತ್ವವೆ ಇರದ ಸುಳ್ಳು ಸೃಷ್ಟಿಯೆ? ಪಂಚೇಂದ್ರಿಯಾನುಭವಕ್ಕೆ ಸಿಕ್ಕು ನೂರಕ್ಕೆ ನೂರು ನಿಜವೆನಿಸಿದರೂ ಆತ್ಯಂತಿಕ ಯಥಾರ್ಥ ಸತ್ಯಕ್ಕೆ ಎರವಾದ ಮಿಥ್ಯೆಯೆ? ಇರದಿದ್ದರೂ ಇರುವಂತೆ ತೋರಿ ಮೈಮನಗಳ ದಿಕ್ಕು ತಪಿಸುವ ಊಹಾತ್ಮಕ ಗೀಳೆ? ಅನುಭಾವಿ ಅಕ್ಕ ಹೇಳುವುದು ಹಾವಾಗಿ ಕಾಡಿ ಉರುಳು ಹಾಕುವ ಹಗ್ಗದ ತುಂಡಿನಂಥ ಮಾಯೆಯ ಬಗ್ಗೆ. ಬಿಟ್ಟರೂ ಬಿಡದ, ಬಿಡದಿದ್ದರಂರೂ ಬೆಂಬತ್ತಿ ಕಾಡುತ್ತಲೇ ಇರುವ ಮಾಯೆ ಒಡ್ಡುವ ಉಭಯಸಂಕಟ ಕೇಳುಗರ, ಓದುಗರ ಅನುಭವಕ್ಕೆ ಬರುವಂತೆ ಅಭಿನೀತವಾಗಿದೆ ಈ ವಚನದಲ್ಲಿ. ಎಂಥೆಂಥ ಮಹಾನ್ ಸಾಧಕರಿಗೂ ತಪ್ಪಿದ್ದಲ್ಲ ಈ ಮಾಯೆಯ ಕಾಟ ಎಂಬ ಮಹಾನ್‌ಸತ್ಯವನ್ನು ಅನಾವರಣಗೊಳಿಸುವ ವಚನವಿದು. ಸಾಮಾನ್ಯರಿಗೆ, ಸೋತು ಹಿಮ್ಮೆಟ್ಟುವ ಅರೆಬರೆ ಸಾಧಕರಿಗಷ್ಟೇ ಅಲ್ಲ, ಗೆದ್ದು ದಾಟಿ ಯಶಸ್ವಿಯಾದವರಿಗೂ ಮಾಯೆಯ ಕಾಟ ಇದ್ದೇ ತೀರುತ್ತದೆ. ಕೇವಲ ಕೆಲವು ಪುಣ್ಯವಂತರು ದೇಹಾತ್ಮವನ್ನೆಲ್ಲ ಒತ್ತೆಯಿಟ್ಟು ಹೋರಾಡಿ ವಿಜಯಶಿಖರವೇರುತ್ತಾರಷ್ಟೆ. ಜಗತ್‌ಸೃಷ್ಟಿಯಲ್ಲಿ ಪುಲ್ಲಿಂಗ ಜೀವಿಗೆ ಸ್ತ್ರೀಲಿಂಗಜೀವಿಯೆ ನಿರಂತರವಾಗಿ ಅತಿ ದೊಡ್ಡ ಮಾಯೆಯಾಗಿ ಕಾಡುವ ಸಂಗತಿಯನ್ನು ಆಯ್ದ ಸಾಧಕ ಜೋಡಿಗಳ ಮೂಲಕ ಎತ್ತಿ ತೋರಿದ್ದಾಳೆ ಅಕ್ಕ. ಯೋಗಿಗೆ ಯೋಗಿಣಿ, ಸವಣ(ಸಮಣ\ಶ್ರವಣ\ಶರಣ)ಗೆ ಸವಣಿ(ಸಮಣಿ\ ಶ್ರವಣೆ\ಶರಣೆ) ಎಂಬ ನಿಘಂಟಿನ ಲಿಂಗಾನುಶಾಸನ ಊಹೆಗೆ ನಿಲುಕುವಂತದು. ಯತಿ ಎಂಬ ಪುಲ್ಲಿಂಗ ಶಬ್ದಕ್ಕೆ ಸಂವಾದಿ ಸ್ತ್ರೀಲಿಂಗ ಶಬ್ದ ಪರಾಕಿ ಎಂಬುದು ಈ ವಚನದಿಂದಲೆ ತಿಳಿಯತ್ತದೆ ಬಹುಜನರಿಗೆ. ಈ ಪರಾಕಿ ಕನ್ನಡತಿ ಪರಾಕಿಯ ತಂಗಿಯೇನಲ್ಲ, ಉಪಟಳ ಅತಿಯಾದರೆ ಆಧ್ಯಾತ್ಮಿಕ ಯತಿಗೂ ತಲೆ ತಟ್ಟಿ ಬುದ್ಧಿ ಕಲಿಸಬಲ್ಲ ಅಕ್ಕ! ಇವಳೆಂಥ ನಿಸ್ಸೀಮಳೆಂದರೆ ತನ್ನ ಮಾತಲ್ಲೇ ಚೆನ್ನಮಲ್ಲನಿಗೂ ಪ್ರೀತಿಯ ತಪರಾಕಿ ಇಕ್ಕಬಲ್ಲಳು. ಯಾಕೆಂದರೆ ಇವಳಿಗೆ ಚೆನ್ನಾಗಿ ಗೊತ್ತು, ಕುಂತಲ್ಲಿ ನಿಂತಲ್ಲಿ ಬಿಟ್ಟೂಬಿಡದೆ ಕಾಡುತ್ತಿರುವ ಮಾಯೆಯೂ ವಸ್ತುತಃ ಶಿವನ ಸ್ವತ್ತೇ ಎಂದು. ಅದಕ್ಕೇ ತಿರುಗುಬಾಣವೆಸೆವಂತೆ ಅವಳು ಹೇಳುವುದು ನಿನ್ನ

ಮಾಯೆಗೆ ನಾನಂಜುವವಳಲ್ಲ ಎಂದು. ನಾ ಅಂಜಿದೆನಾದಡೆ ನಿಮ್ಮಾಣೆ ಎನ್ನುತ್ತಿರುವಳೋ? ನೀ ಅಂಜಿಸಿದೆಯಾದಡೆ ನಿಮ್ಮಾಣೆ ಎಂದು ಅವನನ್ನೆ ಹೊಣೆ ಮಾಡುತ್ತಿರುವಳೋ? ಶಬ್ದಗಳ ಒಳಾರ್ಥವನ್ನು ಹಿಂಜುತ್ತ ಹೋದರೆ ಇಲ್ಲಿನ ಪುಲ್ಲಿಂಗ-ಸ್ತ್ರೀಲಿಂಗ ನಾಮಪದ ಜೋಡಿಗಳು ಬರಿ ಪುರುಷ-ಸ್ತ್ರೀ ಎಂಬ ಲೈಂಗಿಕ ವ್ಯತ್ಯಾಸವನ್ನೂ ಮೀರಿ ಪರಸ್ಪರರ ಯೋಗತ್ವ ಯತಿತ್ವ ಸಮಣತ್ವ ಸಿದ್ಧಿಸಾಧನೆಯ ತೌಲನಿಕ ಮೇಲುಗಾರಿಕೆ, ತಾನು-ಇದಿರು ಎಂಬ ಸೂಕ್ಷ್ಮಾಹಂಕಾರವನ್ನೂ ಸೂಚಿಸುವಂತೆ ಕಾಣುತ್ತವೆ. ಅಕ್ಕಮಹಾದೇವಿ ಅಲ್ಲಮಪ್ರಭು ಇಬ್ಬರೂ ಮಹಾಯೋಗಿ\ನಿ ಮಹಾನುಭಾವಿಗಳೆ. ಈ ಹಿನ್ನೆಲೆಯಿಂದ ನೋಡಿದರೆ ಈ ವಚನ ಪರೋಕ್ಷವಾಗಿ ಪ್ರಭುವನ್ನೂ ಪ್ರಸ್ತಾಪಿಸುತ್ತಿದೆಯೆ ಎಂಬ ಪ್ರಶ್ನೆ ಏಳುತ್ತದೆ.

ಅಕ್ಕನಂಥ ದಿಗಂಬರಾನುಭಾವಿಗೆ ಕಲ್ಯಾಣನಗರಿ ಸುರಕ್ಷಿತ ಸ್ಥಳವೂ ಅಲ್ಲ, ಶಿವಯೋಗದಿ ಏಕಾಂತಸಾಧನೆಗೆ ಸೂಕ್ತ ತಾಣವೂ ಅಲ್ಲವೆಂದು ಮನಗಂಡೇ ಅಲ್ಲಮ ಅವಳ ಆರಾಧ್ಯದೈವ ಶ್ರೀಶೈಲ ಚೆನ್ನಮಲ್ಲಿಕಾರ್ಜುನನ ಕದಳಿವನಕ್ಕೆ ಆಕೆಯನ್ನು ಕಳಿಸಿಕೊಟ್ಟದ್ದು. ಕೌಶಿಕ ಕಿನ್ನರ ಅಲ್ಲಿಗೂ ಹೋಗಿ ಅಕ್ಕನನ್ನು ಭೇಟಿ ಮಾಡಿದ್ದನ್ನ ಕೆಲವು ಕವಿಗಳು ಬಣ್ಣಿಸಿದ್ದಾರೆ. ಹಾಗೆ ಅಲ್ಲಮನೂ ಕದಳಿವನದಲ್ಲಿ ಅಕ್ಕನನ್ನು ಕಂಡಿದ್ದನೆ? ಅಕ್ಕನನ್ನು ಕಳಿಸಿಕೊಟ್ಟ ಕೆಲವೇ ದಿನಗಳಲ್ಲಿ ಅಲ್ಲಮನೂ ಅಲ್ಲಿಗೇ ಹೋದ ಎಂದು ಸೂಚಿಸುತ್ತದೆ. "ಬಂದಿತ್ತು ದಿನ, ಪ್ರಭು ಅಕ್ಕ ಕದಳಿ ದ್ವಾರಕ್ಕೆ" ಎಂಬ ತುರುಗಾಹಿ ರಾಮಣ್ಣನ ವಚನ. ಆದರಲ್ಲೂ ನಿಲ್ಲದ ಅಲ್ಲಮ ಭರತ ಖಂಡವನ್ನೆಲ್ಲ ಚಾರಣಿಸುತ್ತ ಹಿಮವತ್ಕೇದಾರಸಮೇತ ಸವಾಲಕ್ಷ ಪವಿತ್ರ ಕ್ಷೇತ್ರಗಳನ್ನು ಸಂದರ್ಶಿಸಿ ಹನ್ನೆರಡು ವರ್ಷಗಳ ನಂತರ ಬಳಲಿ ಕೃಶಕಾಯನಾದ ಅವಧೂತನಂತೆ ಮತ್ತೆ ಕಲ್ಯಾಣದಲ್ಲಿ ಪ್ರತ್ಯಕ್ಷನಾಗಿ ಬಸವಣ್ಣ ನಿರ್ಮಿಸಿದ ಶೂನ್ಯಸಿಂಹಾಸನವನ್ನು ಬಸವಣ್ಣನ ಸಂಕಲ್ಪಾನುಸಾರವೇ ಹಿಂಬದಿ\ ಪಶ್ಚಿಮ ದ್ವಾರದಿಂದೇರಿ ಕುಳಿತು ಸಕಲರನ್ನೂ ಬೆರಗುಗೊಳಿಸಿದ ಎನ್ನುತ್ತದೆ. ಶಿವಗಣಪ್ರಸಾದಿ ಮಹಾದೇವಯ್ಯ ಸಂಕಲಿಸಿದ ಶೂನ್ಯಸಂಪಾದನೆ (ಸಂ: ಡಾ. ಎಲ್. ಬಸವರಾಜು, ೧೯೬೯). ಮಹಾಮನೆ ಅನುಭಾವ ಮಂಟಪದಲ್ಲಿ ಅಕ್ಕನ ಅಂತರಂಗದ ಚೊಕ್ಕ ನಿಲುವನ್ನು ಜಗಜ್ಜಾಹೀರು ಮಾಡುವ ಸಲುವಾಗಿಯೇ ಮೊನಚಾದ ಪ್ರಶ್ನೆಗಳಿಂದ ತಿವಿದು ಸ್ವಾನುಭಾವದ ಉತ್ತರಗಳನ್ನು ಹೊರತಂದು "ಅವಳ ಶ್ರೀಪಾದಕ್ಕೆ ನಮೋ ನಮೋ" ಎಂದು ಸರ್ವಸಾಕ್ಷಿಯಲ್ಲಿ ಶರಣಾದ ಅಲ್ಲಮ ಮತ್ತೊಮ್ಮೆ ಅವಳೊಡನೆ ಮುಖಾಬಿಲೆಯಾದ ದಾಖಲೆ ಎಲ್ಲೂ ಸಿಕ್ಕಿಲ್ಲ. ಈ ಬಗ್ಗೆ ಹೆಚ್ಚಿನ ಸಂಶೋಧನೆ ಚಿಂತನೆ ಅಗತ್ಯವಿದೆ.

ಮೇಲಿನ ವಚನದ ವಿಸ್ತರಣೆಯಂಥ ಅಕ್ಕನದೇ ಇನ್ನೊಂದು ವಚನವಿದೆಯಲ್ಲ:

**ಪುರುಷನ ಮುಂದೆ ಮಾಯೆ**
**ಸ್ತ್ರೀಯೆಂಬ ಅಭಿಮಾನವಾಗಿ ಕಾಡಿತ್ತು ನೋಡಾ!**
**ಸ್ತ್ರೀಯ ಮುಂದೆ ಮಾಯೆ**
**ಪುರುಷನೆಂಬ ಅಭಿಮಾನವಾಗಿ ಕಾಡಿತ್ತು ನೋಡಾ!**
**ಲೋಕವೆಂಬ ಮಾಯೆಗೆ**





**ಶರಣ ಚಾರಿತ್ರ ಮರುಳಾಗಿ ತೋರುವುದು ನೋಡಾ!**
**ಚೆನ್ನ ಮಲ್ಲಿಕಾರ್ಜುನ ನೊಲಿದ ಶರಣಂಗೆ**
**ಮಾಯೆಯಿಲ್ಲ, ಮರಹಿಲ್ಲ, ಅಭಿಮಾನವೂ ಇಲ್ಲ!**

ಪುರುಷನಿಗಷ್ಟೆ ಅಲ್ಲ ಸ್ತ್ರೀಗೂ ಮಾಯಾಕಾಟ ಉಂಟೆಂಬುದು ಸ್ಪಷ್ಟ. ಹೆಣ್ಣು ಗಂಡು ಎರಡಕ್ಕೂ ತನ್ನದಲ್ಲದ್ದರ ಕುರಿತ ಕುತೂಹಲವೇ ಮುಖ್ಯವಾಗಿ ದೊಡ್ಡ ಮರುಳಾಗಿ ಜೀವನದುದ್ದಕ್ಕೂ ಕಾಡುತ್ತದೆ. ಆದರೆ ಶರಣಚಾರಿತ್ರ್ಯ ಈ ಗೀಳನ್ನು ಗೆದ್ದು ನಿಲ್ಲುವಂತದು. ಅದೂ ಲೋಕದ ಕಣ್ಣಿಗೆ ಮರುಳಾಗಿ ತೋರುವುದೆ ವಿಪರ್ಯಾಸ. ಇಲ್ಲಿ ಶರಣ ಎಂಬುದು ಕೇವಲ ಪುಲ್ಲಿಂಗವಾಚಕವಾಗದೆ, ತನ್ನ ಒಳಾರ್ಥದಲ್ಲಿ ಶರಣಶರಣೆಯರಿಬ್ಬರನ್ನೂ ಒಳಗೊಂಡಿರುವುದು ಗಮನಾರ್ಹ. ಲೋಕದ ಹಂಗು ಹರಿದ ವಿಶುದ್ಧ ಶರಣೆ ಅಥವ ಶರಣನಿಗೆ ಮಾಯೆ ಮೈಮರಹು ಲಿಂಗತಾರತಮ್ಯ ಸಿದ್ಧಿಯ ದುರಭಿಮಾನ ಇವ್ಯಾವುದರ ಸೋಂಕೂ ಇರುವದಿಲ್ಲವಷ್ಟೆ? □

ಭಕ್ತಸ್ಥಲವನರಿದು ತಮ್ಮ ಭಕ್ತಸ್ಥಲದಲ್ಲಿ
ಬಯಲಾದರು ಸಂಗನ ಬಸವರಾಜದೇವರು.
ಮಾಹೇಶ್ವರ ಸ್ಥಲವನರಿದು ತಮ್ಮ ಮಾಹೇಶ್ವರಸ್ಥಲದಲ್ಲಿ
ಬಯಲಾದರು ಮಡಿವಾಳ ಮಾಚಿತಂದೆಗಳು.
ಪ್ರಸಾದಿಸ್ಥಲವನರಿದು ತಮ್ಮ ಪ್ರಸಾದಿಸ್ಥಲದಲ್ಲಿ
ಬಯಲಾದರು ಬಿಬ್ಬಿಬಾಚಯ್ಯಗಳು.
ಪ್ರಾಣಲಿಂಗಿಸ್ಥಲವನರಿದು ತಮ್ಮ ಪ್ರಾಣಲಿಂಗಿಸ್ಥಲದಲ್ಲಿ
ಬಯಲಾದರು ನುಲಿಯ ಚಂದಯ್ಯಗಳು.
ಶರಣಸ್ಥಲವನರಿದು ಶರಣಸ್ಥಲದಲ್ಲಿ
ಬಯಲಾದರು ಘಟ್ಟಿವಾಳಯ್ಯಗಳು.
ಐಕ್ಯಸ್ಥಲವನರಿದು ತಮ್ಮ ಐಕ್ಯಸ್ಥಲದಲ್ಲಿ
ಬಯಲಾದರು ಅಜಗಣ್ಣಯ್ಯಗಳು.
ಇಂತೀ ಷಡ್ವಿಧಸ್ಥಲವನರಿದು ತಮ್ಮ ಷಡ್ವಿಧಸ್ಥಲದಲ್ಲಿ
ಬಯಲಾದರು ಚೆನ್ನಬಸವೇಶ್ವರ ದೇವರು.
ನಿಜಸ್ಥಲನರಿದು ತಮ್ಮ ನಿಜಸ್ಥಲದಲ್ಲಿ
ಬಯಲಾದರು ಅಲ್ಲಮಪ್ರಭುದೇವರು.
ನಿರ್ವಯಲಸ್ಥಲವನರಿದು ತಮ್ಮ ನಿರ್ವಯಲಸ್ಥಲದಲ್ಲಿ
ಬಯಲಾದರು ಏಳ್ನೂರೆಪ್ಪತ್ತಮರಗಣಂಗಳು.
ಇಂತಿವರ ಒಕ್ಕು ಮಿಕ್ಕ ಬಯಲ ಪ್ರಸಾದವ ಕೊಂಡು
ನಾನು ಬಯಲಾದೆನು ಕಾಣಾ ಮಹಾಲಿಂಗ
ತ್ರಿಪುರಾಂತಕದೇವಾ.

– ಕಿನ್ನರಿ ಬ್ರಹ್ಮಯ್ಯ

## ವಚನ ರಸಪ್ರಶ್ನೆ ಸ್ಪರ್ಧೆ

### ವಚನ ರಸಪ್ರಶ್ನೆ-೩೭ರ ಸರಿಯುತ್ತರಗಳು

೧. (ಇ) ನಾರಾಯಣಪ್ರಿಯ ರಾಮನಾಥ ೨. (ಅ) ಉರಿಲಿಂಗದೇವ ೩. (ಈ) ಪರವಶ ೪. (ಆ) ಕಿನ್ನರಿ ಬೊಮ್ಮಯ್ಯ ೫. (ಇ) ಬಿರುಬ

'ಮಹಾಮನೆ'ಯ ಹಲವಾರು ಓದುಗರು "ವಚನ ರಸಪ್ರಶ್ನೆ-೩೭"ರ ಉತ್ತರಗಳನ್ನು ಕಳಿಸಿದ್ದಾರೆ. ಲಾಟರಿ ಎತ್ತುವ ಮೂಲಕ ಆಯ್ಕೆಯಾದ ಇಬ್ಬರು ವಿಜೇತರ ಹೆಸರುಗಳು ಇಂತಿವೆ.

೧. ಶ್ರೀ ಕೆ.ಆರ್. ಶಿವಾರ್ಯ, ಚಿಕ್ಕಮಗಳೂರು
೨. ಶ್ರೀ ಚಿಕ್ಕೋಳ್ ಈಶ್ವರಪ್ಪ, ದಾವಣಗೆರೆ

### ವಚನ ರಸಪ್ರಶ್ನೆ - ೩೮ರ ಪ್ರಶ್ನೆಗಳು

೧. 'ಕೂಡಲಸಂಗಮ ದೇವರಲ್ಲಿ ಬಸವಣ್ಣ' - ಇದು ಯಾರ ಅಂಕಿತ ನಾಮ?
(ಅ) ಏಲೇಶ್ವರ ಕೇತಯ್ಯ (ಆ) ಮೈದುನ ರಾಮಯ್ಯ
(ಇ) ಹಾವಿನಹಾಳ ಕಲ್ಲಯ್ಯ (ಈ) ಉಗ್ಘಡಿಸುವ ಗುಬ್ಬಿದೇವಯ್ಯ

೨. 'ಅಂಗವ ಮರೆದವಂಗೆ' - ಸಾಲು ಯಾರ ವಚನದಲ್ಲಿ ಬರುತ್ತದೆ?
(ಅ) ಹಡಪದ ಅಪ್ಪಣ್ಣ (ಆ) ಹೊಡೆಹುಲ್ಲ ಬಂಕಣ್ಣ
(ಇ) ಹಡಪದ ಅಪ್ಪಣ್ಣನ ಪುಣ್ಯಸ್ತ್ರೀ ಲಿಂಗಮ್ಮ (ಈ) ಸುಂಕದ ಬಂಕಣ್ಣ

೩. 'ಹರುಗುಲ' ಪದದ ಅರ್ಥವೇನು?
(ಅ) ಕಾರಣ (ಆ) ಹರಿಗೋಲು
(ಇ) ಪ್ರಾಣ (ಈ) ಸ್ಥಿತಿ

೪. 'ಉಲುಗಿನ ವೃಕ್ಷ' ಎಂದರೆ?
(ಅ) ದೇಹ (ಆ) ಧ್ವನಿ
(ಇ) ಕೊರತೆ (ಈ) ಅಡ್ಡಿ

೫. 'ಹಾವಿನಹಾಳ ಕಲ್ಲಯ್ಯ'ನ ಅಂಕಿತನಾಮ ಯಾವುದು?
(ಅ) ಸೊಡ್ಡಳ (ಆ) ಧರಮೇಶ್ವರಲಿಂಗ
(ಇ) ಮಹಾಲಿಂಗ ಕಲ್ಲೇಶ್ವರ (ಈ) ಕದಂಬಲಿಂಗ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**

ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦೦೭೦.





# ಅಗಣಿತ

ಡಾ. ಅಮರೇಶ ನುಗಡೋಣಿ

**ದಾರಿಯಲ್ಲಿ ಬೀದಿಯಲ್ಲಿ ಮನೆಗಳಲ್ಲಿ**
**ಹೊನ್ನು ಹೆಣ್ಣು ಮಣ್ಣಿನ ಮೇಲಣ ಕಾಮವಿಕಾರ ತೋರಿದಡೆ**
**ಅದಕ್ಕೇನೂ ಶಂಕೆಯಿಲ್ಲ**
**ಅದೇನು ಕಾರಣವೆಂದಡೆ**
**ಚಿತ್ರದ ಹುಲಿ, ಕನಸಿನ ಹಾವು, ಜಲಮಂಡೂಕ ಕಚ್ಚಿ ಸತ್ತವರುಂಟೆ?**
**ಇದು ಕಾರಣ, ಜಾಗ್ರಸ್ವಪ್ನಸುಷುಪ್ತಿಗಳಲ್ಲಿ ಕಾಮವಿಕಾರ ತೋರಿತ್ತೆಂದು**
**ಶಸ್ತ್ರ ಸಮಾಧಿ ನೀರು ನೇಣು ವಿಷ ಔಷಧಿಗಳಿಂದ ಘಟವ ಬಿಟ್ಟೊಡೆ**
**ಆತ ಗುರುದ್ರೋಹಿ, ಲಿಂಗದ್ರೋಹಿ, ಜಂಗಮದ್ರೋಹಿ**
**ಇದು ಭಕ್ತರಾಚರಣೆ, ವಿರಕ್ತನಿರ್ಣಯ**
**ಇಂತಪ್ಪವರಿಗೆ ಸದ್ಯೋಜಾತ ಲಿಂಗವುಂಟಿಲ್ಲವೆಂದೆನು**

**– ಅವಸರದ ರೇಚಣ್ಣ**

ಈ ವಚನದ ಭಾವವನ್ನು ಅನೇಕ ವಚನಗಳಲ್ಲಿ ಕಾಣಬಹುದು. ಶಿವದೀಕ್ಷೆ ಪಡೆದ ವ್ಯಕ್ತಿಯು ಕಾಯ, ವಾಚ, ಮನಸ್ಸು ಶುದ್ಧವಾಗಿರಬೇಕು. ಲೌಕಿಕದ ಸೆಳೆತಕ್ಕೆ ಮನಸ್ಸು ಅಲುಗದೆ ಶಾಂತವಾಗಿರಬೇಕು. ವ್ಯಕ್ತಿಯ ಅಧೋಗತಿಗೆ ಕಾರಣವಾಗುವುದು. ಹೊನ್ನು, ಹೆಣ್ಣು, ಮಣ್ಣುಗಳ ಮೇಲಿನ ಮೋಹವನ್ನು ತೊರೆದಿರಬೇಕು. ಇಲ್ಲದಾಗ ತೊರೆಯುವುದು ದೊಡ್ಡದಲ್ಲ. ಇದ್ದಾಗ ತೊರೆಯುವುದು ಸಾಧಕನ ಗುಣ. ಇದ್ದಾಗ, ಇಲ್ಲದಾಗ ಎಂಬ ಉಭಯವನ್ನು ಮೀರಬೇಕು. ಹೊನ್ನು, ಹೆಣ್ಣು, ಮಣ್ಣು ಇವು ಕಂಡಾಗ ವಿಚಲಿತನಾಗಬಾರದು. ಈ ಮೂರರಲ್ಲಿರುವ ಗುಣ ಏನಿದ್ದರೂ ಅದನ್ನು ಲೌಕಿಕರಂತೆ ಭಾವಿಸಬಾರದು. ಭಾವಿಸಿದರೂ ಅಡ್ಡಿಯಿಲ್ಲ. ಯಾಕೆಂದರೆ ಚಿತ್ರದ ಹುಲಿ, ಕನಸಿನ ಹಾವು, ನೀರು ಸಾವು ಇವು ಹಿಡಿದವು ಎಂದರೆ ಸಾಯುವುದು ಉಂಟೆ? ಎಂಬ ಮಾರ್ಮಿಕವಾದ ಪ್ರಶ್ನೆಯನ್ನು ಕೇಳಿಕೊಳ್ಳಲಾಗಿದೆ. ಮನುಷ್ಯರಿಗೆ ಮನಸ್ಸಿನಲ್ಲಿ ನೂರೆಂಟು ಕಾಮವಿಕಾರಗಳು ಸುಳಿದುಹೋದರೆ ಅವುಗಳಿಂದ ಏನೂ ಆಗದು. ಅವು ಸುಳಿದಂತೆ ಮಾಯವಾಗುತ್ತವೆ. ಮನಸ್ಸಿನಲ್ಲಿ, ಕನಸಿನಲ್ಲಿ ಕಾಮವಿಕಾರ ಸುಳಿದು ಹೋಯಿತ್ತೆಂದು, ಸಾಧನೆಗೆ ಕುಂದು ಉಂಟಾಯಿತ್ತೆಂದು ಹೆದರಿ ನಾನಾ ರೀತಿಯ

'ಸೂರು', ಎಂ.ಪಿ. ಪ್ರಕಾಶ ನಗರ, ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ,
ಹೊಸಪೇಟೆ - ೫೮೩ ೨೦೧ ಬಳ್ಳಾರಿ ಜಿಲ್ಲೆ ಮೊ: ೯೪೮೧೫ ೬೯೪೫೯

ದೇಹತ್ಯಾಗದ ಕಠಿಣ ವ್ರತಗಳನ್ನು ಹಿಡಿಯುವುದನ್ನು ಈ ವಚನ ಖಂಡಿಸುತ್ತದೆ. ಕೆಲವು ಧರ್ಮಗಳಲ್ಲಿ ಕಾಣುವ ಜೀವ ವಿರೋಧಿ ಕಠಿಣ ಶಿಕ್ಷೆಗೆ ಪವಿತ್ರ ದೇಹವನ್ನೇ ಬಲಿ ಕೊಡುವುದನ್ನು ಈ ವಚನ ವಿರೋಧಿಸುತ್ತದೆ. ಈ ಬಗೆಯ ಶಿಕ್ಷೆಗೆ ಒಳಗಾಗುವವರು ಗುರುದ್ರೋಹಿಗಳು, ಲಿಂಗದ್ರೋಹಿಗಳು, ಜಂಗಮದ್ರೋಹಿಗಳು.

ವಚನಕಾರ್ತಿ ಮಸಣಮ್ಮ ತನ್ನ ಒಂದು ವಚನದಲ್ಲಿ, ಹೊನ್ನು ಬಿಟ್ಟು, ಹೆಣ್ಣು ಬಿಟ್ಟು, ಮಣ್ಣು ಬಿಟ್ಟು ಲಿಂಗವನ್ನು ಒಲಿಸಿಕೊಳ್ಳಬೇಕು ಎನ್ನುವವರು ಈ ಮೂರಕ್ಕೂ ಲಿಂಗಕ್ಕೂ ವಿರುದ್ಧವೇ ಯಾಕೆ ಎಂದು ಕೇಳುತ್ತಾಳೆ. ಅಂಗ ಬಿಟ್ಟು, ಇಂದ್ರಿಯಗಳನ್ನು ಬಿಟ್ಟು, ಲೋಕ ಬಿಟ್ಟು ಲಿಂಗ ಒಲಿಸಿಕೊಳ್ಳುತ್ತೇನೆ ಎಂಬುವವರನ್ನು ಪ್ರಶ್ನಿಸುತ್ತ, ಅರಿತು ಮರೆಯಬಾರದು ಎನ್ನುತ್ತಾಳೆ. ಹೊನ್ನನ್ನು ಹೊನ್ನೆಂದು, ಹೆಣ್ಣನ್ನು ಹೆಣ್ಣೆಂದು, ಮಣ್ಣನ್ನು ಮಣ್ಣೆಂದು ಭಾವಿಸಬಾರದು. ಇವುಗಳಿಗೆ ಲೌಕಿಕದಲ್ಲಿರುವ ಅರ್ಥ ಬೇರೆ. ಭಕ್ತನಲ್ಲಿರುವ ತಿಳುವಳಿಕೆ ಬೇರೆ. ಲಿಂಗ, ಜಂಗಮ ಸಾಧಕರಿಗೆ ಮನದ ಮುಂದಿನ ಆಸೆ ಲವಲೇಶವೂ ಇರುವುದಿಲ್ಲ, ಇರಬಾರದು.



ನಿನ್ನ ಹರೆಯದ ರೂಹಿನ ಚೆಲುವಿನ, ನುಡಿಯ ಜಾಣಿನ,
ಸಿರಿಯ ಸಂತೋಷದ,
ಕರಿ ತುರಗ ರಥ ಪದಾತಿಯ ನೆರವಿಯ,
ಸತಿ ಸುತರ ಬಂಧುಗಳ ಸಮೂಹದ,
ನಿನ್ನ ಕುಲದಭಿಮಾನದ
ಗರ್ವವ ಬಿಡು, ಮರುಳಾಗದಿರು.
ಅಕಟಕಟಾ ರೋಮಜನಿಂದ ಹಿರಿಯನೆ?
ಮದನನಿಂ ಚೆಲುವನೆ?
ಸುರಪತಿಯಿಂದ ಸಂಪನ್ನನೆ?
ವಾಮದೇವ ವಶಿಷ್ಠರಿಂದ ಕುಲಜನೆ?
ಅಂತಕನ ದೂತರು ಬಂದು ಕೈವಿಡಿದೆಳದೊಯ್ಯುವಾಗ
ನುಡಿ ತಡವಿಲ್ಲ ಕೇಳೋ ನರನೆ!
ಎನ್ನ ಮಾಹಾಲಿಂಗ ತ್ರಿಪುರಾಂತಕದೇವರ ಪೂಜಿಸಿಯಾದರೆ
ಕೇಡಿಲ್ಲದ ಪದ ದೊರಕೊಂಬುದು ಮರುಳೆ.

– ಕಿನ್ನರಿ ಬ್ರಹ್ಮಯ್ಯ





# ಅನುಭಾವದ ಅಭಿವ್ಯಕ್ತಿಯಾಗಿ ವಚನಗಳು

**ಪ್ರೊ. ಓ.ಎಲ್. ನಾಗಭೂಷಣಸ್ವಾಮಿ**

## ಅನುಭಾವ ಮತ್ತು ಭಾಷೆ – ಭಾಗ ೩

**ತೀ**ವ್ರವಾಗಿ ಅನುಭವವನ್ನು ಪಡೆದ ವ್ಯಕ್ತಿ ಅದನ್ನು ಹೇಳಿಕೊಳ್ಳುವ ಮೂಲಕ ತನ್ನ ಗ್ರಹಿಕೆಯ ಕೋನ ಬದಲಾದದ್ದನ್ನು, ಪ್ರಜ್ಞೆಯ ಪಲ್ಲಟವನ್ನು ತಿಳಿಸುತ್ತಿರಬಹುದು, ಕೇಳುತ್ತಿರುವವರ ಗ್ರಹಿಕೆ ಮತ್ತು ಪ್ರಜ್ಞೆಯಲ್ಲೂ ಅಂಥ ಬದಲಾವಣೆ ತರಲು ಬಯಸಬಹುದು. ಇದಕ್ಕೆ ಇರುವ ಒಂದೇ ದಾರಿಯೆಂದರೆ ಭಾಷೆಯನ್ನು ಲೋಕದ ಉಪಯೋಗದ ರೀತಿಯಲ್ಲೂ ಬಳಸದೆ, ಭಾವದ ಉಪಯೋಗದ ರೀತಿಯಲ್ಲೂ ಬಳಸದೆ ಬೇರೆಯದೇ ಇನ್ನೊಂದು ರೀತಿಯಲ್ಲಿ ಬಳಸುವುದು.

ಝೆನ್‌ನಲ್ಲಿ ಎದುರಾಗುವ ಕೋನ್‌ಗಳು, ಕನ್ನಡದಲ್ಲೇ ಇರುವ 'ಮುಂಡಿಗೆ'ಗಳು ನೆನಪಾಗುತ್ತವೆ. ಇವು ಒಗಟುಗಳಲ್ಲ. ಒಗಟುಗಳು ಹೋಲಿಸಲ್ಪಡುವ ವಸ್ತು ಮಾತ್ರ ಇರುವ ಅರೆ ರೂಪಕಗಳು. ಅವಕ್ಕೆ ಖಚಿತವಾದ ಉತ್ತರಗಳಿರುತ್ತವೆ. ಮುಂಡಿಗೆಗಳು, ಕೋನ್‌ಗಳು ಅಂಥವಲ್ಲ. 'ಒಂದು ಕೈಯ ಚಪ್ಪಾಳೆಯ ಸದ್ದು ಕೇಳಿಸು' ಎಂದು ಝೆನ್ ಗುರು ಶಿಷ್ಯನಿಗೆ ಹೇಳಿದಾಗ ಆತ ಯಾವ ಸಿದ್ಧಾಂತವನ್ನೂ ಅರುಹುತ್ತಿರುವುದಿಲ್ಲ, ಯಾವ ತಿಳಿವಳಿಕೆಯನ್ನೂ ದಾಟಿಸುತ್ತಿರುವುದಿಲ್ಲ. ಶಿಷ್ಯನಿಗೆ ನಿರ್ದಿಷ್ಟ ತತ್ವವನ್ನೋ, ಸಿದ್ಧಾಂತವನ್ನೋ ಮನದಟ್ಟು ಮಾಡುವ ಉದ್ದೇಶವಿದ್ದರೂ ಅದು ಹಾಗೆ ಬೋಧನೆಯ ಭಾಷೆಯಲ್ಲಿ ವ್ಯಕ್ತವಾಗುವುದಿಲ್ಲ. ಒಂದು ಕೈಯ ಚಪ್ಪಾಳೆಯ ಸದ್ದು ಯಾವುದು, ಏನು ಅನ್ನುವುದನ್ನು ಗ್ರಹಿಸಲು ಶಿಷ್ಯನ ಮನಸ್ಸು ಭಾಷೆಯ ಅರ್ಥಗಳ ವಲಯವನ್ನು ಮೀರಬೇಕು; ಒಂದು ಬಗೆಯ ಧ್ಯಾನಸ್ಥ ಸ್ಥಿತಿಯನ್ನು ತಂದುಕೊಳ್ಳಬೇಕು; ನಮ್ಮೆಲ್ಲ ಜ್ಞಾನವನ್ನು ನಿಯಂತ್ರಿಸುವ ಅರ್ಥದ ವರ್ಗೀಕರಣಗಳನ್ನು ದಾಟಿಕೊಂಡು ಹೊಸ ಎಚ್ಚರ, ಹೊಸ ಅನುಭವಕ್ಕೆ ಸನ್ನದ್ಧವಾಗಬೇಕು. ಹೀಗೆ ಶಿಷ್ಯನ ಪ್ರಜ್ಞೆಯಲ್ಲಿ ಬದಲಾವಣೆಯನ್ನು ಉಂಟುಮಾಡುವುದು ಗುರು ಬಳಸುವ ಕೋನ್‌ನ ಅನುಭಾವಿಕ ಭಾಷೆಯ ಉದ್ದೇಶ. ಇಂಥ ಕೋನ್‌ಗಳಲ್ಲಿ ಭಾಷೆಯು ಲೌಕಿಕವಾದ ಪ್ರತಿಪಾದನೆಗೆ ಬಳಕೆಯಾಗುವುದಿಲ್ಲ; ವಸ್ತು, ಅಥವ ಅನುಭವಗಳ ವಿವರಣೆಯನ್ನೂ ಮಾಡುವುದಿಲ್ಲ. ಬದಲಾಗಿ ತಾರ್ಕಿಕ, ಲೌಕಿಕ ಅರ್ಥಗಳಿರದ ವಾಕ್ಯದ ಬಗ್ಗೆ ಮನಸ್ಸು ಕೊಟ್ಟು ಧ್ಯಾನಿಸುವುದೆಂದರೆ

ನಂ. ೯೯೯, ಹಿಮಾಲಯ, ೫ನೆ ಮುಖ್ಯರಸ್ತೆ, ಅರವಿಂದ ನಗರ, ಮೈಸೂರು ೫೭೦ ೦೨೩
ಮೊ: ೯೪೮೦೩ ೭೯೮೩೭

ಭಾಷೆಯಲ್ಲೇ ಇರುವ ಅಸಂಗತತೆ ಮತ್ತು ವಿರೋಧಾಭಾಸಗಳನ್ನು ಧ್ಯಾನಿಸುವ ಕೆಲಸ.

'ಒಂದು ಕೈ ಚಪ್ಪಾಳೆಯ ಸದ್ದು' ಎಂಬ ಉದಾಹರಣೆಯನ್ನೇ ಇನ್ನಷ್ಟು ವಿವರವಾಗಿ ನೋಡೋಣ. ಈ ಕೋನ್‌ಗೆ ತಾರ್ಕಿಕವಾದ ಅರ್ಥವನ್ನು ಹುಡುಕುವುದು ಅಸಾಧ್ಯ; ಲೋಕಕ್ಕೆ ಅತೀತವಾದ ಆಧ್ಯಾತ್ಮಿಕ ಅರ್ಥವನ್ನು ಹುಡುಕಿಕೊಳ್ಳುವುದಕ್ಕೂ ಆಗುವುದಿಲ್ಲ; ಭಾಷೆಯಲ್ಲಿ ನಿರೂಪಣೆಗೊಳ್ಳುವ ಜ್ಞಾನದ ಬಗೆಬಗೆಯ ವಿನ್ಯಾಸಗಳಲ್ಲಿ ಯಾವುದೊಂದಕ್ಕೂ ಹೊಂದಾಣಿಕೆಯಾಗುವುದಿಲ್ಲ. ಈ ಎಲ್ಲವನ್ನೂ ನಿರಾಕರಿಸುತ್ತ, ಭಾಷೆಯ ಆತ್ಮವೆಂದೇ ತಿಳಿಯಲಾಗಿರುವ ಅರ್ಥವನ್ನೂ ನಿರಾಕರಿಸುತ್ತ, ಶಿಷ್ಯನಾದವನು ಧ್ಯಾನಿಸಬೇಕು. ಪದವು ಶರೀರ, ಅರ್ಥವು ಆತ್ಮ ಎಂಬ ಮಾಮೂಲು ತಿಳಿವಳಿಕೆ ಇಲ್ಲಿ ಉಪಯೋಗವಿಲ್ಲ. ಅರ್ಥವೇ ಇರದ ವಾಕ್ಯದ ಧ್ಯಾನ, ನಾಗಾರ್ಜುನನ ಮಾತಿನಲ್ಲಿ ಹೇಳುವುದಾದರೆ, ಅನಾತ್ಮ ಸ್ಥಿತಿಯ ಅರಿವನ್ನು ಮೂಡಿಸಬಹುದು. ವಾಣಿಯ ಅರ್ಥವೇ ಇರದ ನಿರ್-ವಾಣ ಸ್ಥಿತಿಯನ್ನು ತಲುಪಬಹುದು. ಆದರೆ ಗಮನಿಸಿ, ಯಾವುದನ್ನು ಪ್ರಜ್ಞೆಯ ಸಾಮಾನ್ಯ ಸ್ಥಿತಿ ಅನ್ನುತ್ತೇವೋ ಅದರಿಂದ ಪ್ರಜ್ಞೆಯ ಅ-ಸಾಮಾನ್ಯ ಸ್ಥಿತಿಯತ್ತ ನಡೆಸುವ ಪಯಣ, ಅಥವ ಹೊರಳಿಕೊಳ್ಳುವ ಕ್ರಿಯೆಗೆ ನೆರವು ನೀಡುವುದು ಅರ್ಥವಿರದ, ಅಸಂಗತವಾದ ಆದರೂ ವ್ಯಾಕರಣಬದ್ಧವಾದ ಸಮರ್ಪಕ ವಾಕ್ಯವನ್ನು ಸೃಷ್ಟಿಸಬಲ್ಲ ಭಾಷೆಯ ಸಾಮರ್ಥ್ಯವೇ. ಪ್ರಜ್ಞೆಯ ಒಂದು ಸ್ಥಿತಿಯಿಂದ ಇನ್ನೊಂದು ಸ್ಥಿತಿಯನ್ನು ತಲುಪಲು, ಅದಕ್ಕೆ ಹೊರಳಿಕೊಳ್ಳಲು, ಅಥವ ಸಾಧ್ಯಮಾಡಿಕೊಳ್ಳಲು, ಕಂಡುಕೊಳ್ಳಲು? ಯಾವ ಮಾತನ್ನು ಬಳಸುವುದು ಸೂಕ್ತವೋ ಹೊಳೆಯುತ್ತಿಲ್ಲ- ಉಪಕರಣವನ್ನು ಒದಗಿಸುವುದೇ ಅನುಭಾವದ ಭಾಷೆಯ ಉದ್ದೇಶ ಅನ್ನುವುದನ್ನು ಗಮನಿಸಿ.

ಕೋನ್‌ಗಳನ್ನು ಕುರಿತು ಝೆನ್ ಗುರು ಹಾಕಿನ್ ಹೀಗೆ ವಿವರಿಸುತ್ತಾನೆ: ಕೋನ್ ಬಗ್ಗೆ ಧ್ಯಾನಿಸುತ್ತಾ ಇಚ್ಛೆ ದಣಿಯುತ್ತದೆ, ಮನಸ್ಸು ಸಾಯುತ್ತದೆ; ಕಮರಿಯ ಅಂಚಿನಲ್ಲಿ ಸಾಗುವಾಗ ಕೈಯೂರಲು, ಕಾಲೂರಲು ಆಸರೆಯೇ ಇಲ್ಲವಾದಾಗ ಎದುರಾಗುವಂಥ ಸ್ಥಿತಿ ಏರ್ಪಡುತ್ತದೆ; ಎಲ್ಲ ಆಲೋಚನೆಗಳೂ ಮಾಯವಾಗಿ ಶಿಷ್ಯನ ಎದೆಯಲ್ಲಿ ಕಳವಳದ ಉರಿ ಏಳುತ್ತದೆ; ಮೈ ಮನಸ್ಸು ಎರಡೂ ಮುರಿದವು ಅನಿಸುತ್ತದೆ; ಕಮರಿಯ ಅಂಚಿನಲ್ಲಿ ಕೇವಲ ಬೆರಳುಗಳ ತಾಕತ್ತನ್ನು ನಂಬಿ ನೇತಾಡಿಕೊಂಡಿದ್ದವನು ಕೊನೆಗೆ ಆ ಹಿಡಿತವನ್ನೂ ಸಡಿಲಮಾಡಿದಂತೆ; ಇದು ಮರು ಹುಟ್ಟು, ಸ್ವ-ಭಾವದ ನೋಟ, ಮಹಾನ್ ಆನಂದ'. ಕೋನ್ ಅಥವ ಅನುಭಾವದ ಯಾವುದೇ ನುಡಿ ನಮಗೆ ನೀಡುವ ವಿವೇಕವೆಂದರೆ ಜ್ಞಾನ ಎಂದು ಯಾವುದನ್ನು ನಾವು ಕರೆಯುತ್ತೇವೋ ಅದು ಅನುಭವಕ್ಕೆ ಬಂದಾಗ, ಆ ಅನುಭವವನ್ನು ಭಾಷಿಕವಾದ, ಅಥವ ಇನ್ನು ಯಾವುದೇ ರೂಪದ ಕುರುಹಿನಲ್ಲಿ ಬಂಧಿಸಿಡಲು ಸಾಧ್ಯವಿಲ್ಲ. ಜ್ಞಾನದ ಅನುಭವನ್ನು ಹಿಡಿದಿಟ್ಟುಕೊಳ್ಳುವುದು ಅಸಾಧ್ಯ ಅನ್ನುವ ವಿವೇಕವನ್ನು ನೀಡುವುದು ಅನುಭಾವದ ಭಾಷೆಯ ಬಳಕೆಯ ಇನ್ನೊಂದು ಉದ್ದೇಶ.

ಇದನ್ನು ವಿವರಿಸುವ ಎರಡು ಅಲ್ಲಮವಚನಗಳನ್ನು ನೋಡಿ:

**ಅರಿವು ಅರಿವು ಎನುತಿಪ್ಪಿರಿ, ಅರಿವು ಸಾಮಾನ್ಯವೆ ?**





**ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ**
**ನಿಂದ ಹೆಜ್ಜೆಯನರಿಯಬಾರದು.**
**ಮುಂದಣ ಹೆಜ್ಜೆಯಳಿದಲ್ಲದೆ, ಒಂದು ಪಾದ ನೆಲೆಗೊಳ್ಳದು.**
**ನೆಲನ ಬಿಟ್ಟು ಆಕಾಶದಲ್ಲಿ ನಿಂದು ಮುಗಿಲೊಳಗೆ ಮಿಂಚಿದಲ್ಲದೆ**
**ತಾನಾಗಬಾರದು.ಗುಹೇಶ್ವರನೆಂಬುದು ಬರಿದೆ ಬಹುದೆ ಹೇಳಿರೆ ?**

[ಸಂಪುಟ ೨, ವಚನ ೪೭೫]

ಗತದ ನೋಡಿ ಕಂಡಲ್ಲದೆ ವರ್ತಮಾನದ ಅರಿವಿಲ್ಲ. ಮುಂದಿನ ಹೆಜ್ಜೆ ಅಳಿಯದಿದ್ದರೆ, [ಭವಿಷ್ಯ ಸಾಯದಿದ್ದರೆ ಅನ್ನಬಹುದೇ] ಇಂದು, ಈ ಕ್ಷಣದಲ್ಲಿ ನೆಲೆ ಇರಲು ಸಾಧ್ಯವಿಲ್ಲ. ನೆಲವನ್ನು ಬಿಟ್ಟು ಆಕಾಶದಲ್ಲಿ ನಿಂತು ಮುಗಿಲಲ್ಲಿ ಕ್ಷಣಾರ್ಧ ಮಿಂಚುವ ಮಿಂಚಾಗದಿದ್ದರೆ ತಾನು ಏನು ಎಂಬ ಅರಿವಾಗದು ಎಂಬ ಮಾತು ಪ್ರಜ್ಞೆಯಲ್ಲಿ ಆಗಬೇಕಾದ, ಅನುಭಾವಿಯಲ್ಲಿ ಆಗುವ, ಪ್ರಜ್ಞೆಯ ಪಲ್ಲಟವನ್ನು ಹೇಳುತ್ತದೆ. ನಮ್ಮ ಮನಸ್ಸನ್ನು ಆಳುವ ಭೂತ ಭವಿಷ್ಯ ವರ್ತಮಾನವೆಂಬ ಸಂಕೋಲೆ ಕತ್ತರಿಸಿ ಈ ಕ್ಷಣದಲ್ಲಿ ಮಾತ್ರ ಸಂಪೂರ್ಣವಾಗಿ ಬದುಕುವುದೆಂದರೆ ಯಾವ ಅವಲಂಬನೆಯೂ ಇರದೆ ಈ ಕ್ಷಣದ ಮಿಂಚಿನಂತೆ ಇರುವುದು, ಇದು ತಾನಾಗುವ ಪರಿ ಎಂಬುದು ಮೈ ಝುಮ್ಮೆನಿಸುವಂತೆ ಮಾಡುತ್ತದೆ.

ಗುಹೇಶ್ವರನೈದಾನೆ ಇಲ್ಲದಂತೆ. -ಇದು ಅಲ್ಲಮನ ವಚನವೊಂದರಲ್ಲಿ ಬರುವ ಮಾತು [ಸಂಪುಟ ೨, ವಚನ ೬೬೮]. ಇದೇ ಅರ್ಥದ ನುಡಿ ಸಿಮಿಯೋನ್‌ವೇಲ್ ಎಂಬ ಫ್ರೆಂಚ್ ಅನುಭಾವಿಯಲ್ಲೂ ಕಾಣುತ್ತದೆ. God can only be present in creation in the form of absence 'ದೇವರು ತನ್ನ ಸೃಷ್ಟಿಯಲ್ಲಿ ಇಲ್ಲವಾಗಿ ಮಾತ್ರ ಇರಬಲ್ಲ' ಅನ್ನುತ್ತಾಳೆ ಆಕೆ. ಅನುಭಾವಿಗೂ, ಅನುಭಾವಿಯ ನುಡಿಯನ್ನು ಕೇಳುವವರಿಗೂ ಇರುವ ಸಂಬಂಧ ಅನುಭಾವಿಯ ಭಾಷೆಯ ಬಳಕೆಯ ಮೂಲಕ ಹೇಗೆ ರೂಪುಗೊಳ್ಳುತ್ತದೆ ಅನ್ನುವುದನ್ನು ಈ ಉದಾಹರಣೆಯ ಮೂಲಕ ಪರಿಶೀಲಿಸಬಹುದು.

ನಮಗೆಲ್ಲ ಪರಿಚಿತವಾಗಿರುವ ಹಿಂದಿಯ ವಾಕ್ಯವನ್ನು ನೆನೆದುಕೊಳ್ಳೋಣ. ನಹೀ ಹೈ ಅನ್ನುವ ಮಾತನ್ನು ಎಷ್ಟೊಂದು ಸಿನಿಮಾಗಳಲ್ಲಿ, ಹಿಂದಿ ಧಾರಾವಾಹಿಗಳಲ್ಲಿ ಕೇಳಿದ್ದೇವೆ. ಇಲ್ಲ ಇದೆ/ ಇಲ್ಲವಾಗಿದೆ ಅನ್ನುವುದು ಈ ಹಿಂದೀ ವಾಕ್ಯದ ಅನುವಾದ. ಹಿಂದಿಯಷ್ಟು ವಾಚ್ಯವಾಗಿ ಅಲ್ಲದಿದ್ದರೂ ಕನ್ನಡದಲ್ಲೂ 'ಇಲ್ಲ' ಅನ್ನುವ ಮಾತು ಇಲ್ಲವಾಗಿದೆ/ಇದ್ದಾನೆ/ ಇದ್ದಾಳೆ ಅನ್ನುವ ಅರ್ಥದಲ್ಲೇ ಬಳಕೆಯಾಗುತ್ತದೆ. ಯಾವುದನ್ನೇ ಆಗಲಿ ಇಲ್ಲ ಅನ್ನುವ ಮುನ್ನ ಇದೆ ಅನ್ನುವುದನ್ನು ಸ್ಥಾಪಿಸಬೇಕು, ಅಥವ ಅದು ಇಲ್ಲವಾಗಿ ಇದೆ ಅನ್ನಬೇಕು. ಇಂಗ್ಲಿಶಿನಲ್ಲಿ ಈಸ್ ನಾಟ್ ಅನ್ನುವುದನ್ನೇ ನೋಡಿ. ಮೊದಲು ಈಸ್, 'ಇದೆ' ಎಂದು ಹೇಳಿ ಆಮೇಲೆ ನಿರಾಕರಣೆಯ ನಾಟ್ ಹೇಳಬೇಕು. ಭಾಷೆಯ ಈ ನಿಯಮವನ್ನೇ ಅಲ್ಲಮ, ಸಿಮಿಯೋನ್ ವೇಲ್ ಈ ಉದಾಹರಣೆಗಳಲ್ಲಿ ಬಳಸಿಕೊಂಡಿದ್ದಾರೆ. ಆದರೆ,

ಗಮನಿಸಿ ನೋಡಿ. ಈ ವಾಕ್ಯವನ್ನು ತಾರ್ಕಿಕವಾಗಿ ಹೇಗೆ ವಿವರಿಸುವುದು? ದೇವರು ಇದ್ದಾನೆ ಎನ್ನುತ್ತಿದೆಯೋ, ಇಲ್ಲ ಎನ್ನುತ್ತಿದೆಯೋ, ಇದ್ದರೂ ಕಾಣುವುದಿಲ್ಲ ಅನ್ನುತ್ತಿದೆಯೋ...

ನಿರಾಕರಣೆಯು ಭಾಷೆಯ ಮೂಲಕವೇ ಸಂಭವಿಸಬೇಕು. ನಿರಾಕರಣೆ ಇರುವುವುದು ಭಾಷೆಯಲ್ಲೇ ಹೊರತು ನಿಸರ್ಗದಲ್ಲಲ್ಲ. ಇದು ಕೆನೆತ್ ಬರ್ಕ್ ಎಂಬ ವಿಮರ್ಶಕ ಹೇಳಿದ ಮಾತು. ನಿರಾಕರಣೆಗೆ ಭಾಷೆ ಬೇಕೇ ಬೇಕು. 'ಕನಸಿನಲ್ಲಿ ಯಾರೋ ಬಂದಿದ್ದಳು, ಅವಳು ಅಮ್ಮನ ಹಾಗಿರಲಿಲ್ಲ' ಎಂಬ ಉದಾಹರಣೆಯಲ್ಲಿ ಫ್ರಾಯ್ಡ್ ಸೂಚಿಸುವ ಹಾಗೆ ಏನನ್ನಾದರೂ ನಿರಾಕರಿಸುವ ಮುನ್ನ ಅದನ್ನು ಹೆಸರಿಸಿ, ಅದು ಅಸ್ತಿತ್ವ ಪಡೆಯುವಂತೆ ಮಾಡಲೇಬೇಕು. ಆದ್ದರಿಂದಲೇ ಅಲ್ಲಮ ಮತ್ತು ಸಿಮಿಯೋನ್ ವೇಲ್‌ರ ಮಾತು ಏನನ್ನು ನಿರಾಕರಿಸುತ್ತಿದೆ, ಏನನ್ನು ಸ್ಥಾಪಿಸುತ್ತಿದೆ ಅನ್ನುವುದು ನಮ್ಮ ನಮ್ಮ ವ್ಯಾಖ್ಯಾನದ ಸಂಗತಿಗಳಾಗಿಬಿಡಬಹುದು.

ಅನುಭಾವದ ನುಡಿಗಳ ವ್ಯಾಖ್ಯಾನ ಎಲ್ಲ ನಾಗರಿಕತೆಗಳಲ್ಲೂ ದೊಡ್ಡ ಪ್ರಮಾಣದಲ್ಲೇ ನಡೆದಿದೆ. ಕೋಡಗನ ಕೋಳಿ ನುಂಗಿತ್ತು ಅನ್ನುವಂಥ ನುಡಿಗಳು ಸುಪ್ರಸಿದ್ಧವೋ ಜನಪ್ರಿಯವೋ ಆಗಿ, ಕೋಡಗ ಎಂದರೆ ಮನಸ್ಸು, ಕೋಳಿ ಎಂದರೆ ಅರಿವು ಅನ್ನುವ 'ಉತ್ತರ'ಗಳು ಹುಟ್ಟಿಕೊಂಡು ಅನುಭಾವಿಯು ಆ ನುಡಿಯನ್ನು ಆಡಿದಾಗ ಕೇಳುಗರ ಮನಸ್ಸಿನಲ್ಲಿ ಏನು ಸಂಭವಿಸಬೇಕೆಂದು ಬಯಸಿದ್ದನೋ ಅದು ನಡೆಯುವ ಅವಕಾಶವೇ ತಪ್ಪಿ ಹೋಗಿದೆ. ಅನುಭಾವದ ನುಡಿ ಒಂದು ಉತ್ತರವಿರುವ ಒಗಟಲ್ಲ. ಅವುಗಳ ಉದ್ದೇಶ ಕೇಳುಗರ ಮನಸಿನ/ಪ್ರಜ್ಞೆಯ/ಅರಿವಿನ ಪರಿವರ್ತನೆ. ಅರ್ಥವಾಗುವುದಿಲ್ಲ ಅನಿಸುವಂಥ ಅನುಭಾವದ ನುಡಿಗೆ, ಬೆಡಗಿನ ಮಾತಿಗೆ, ಮುಂಡಿಗೆಗೆ, ಕೋನ್‌ಗೆ ಒಂದು ಸ್ಪಷ್ಟ ಉತ್ತರವನ್ನು ಹುಡುಕುವುದು ಆ ಬಗೆಯ ಭಾಷಾ ಬಳಕೆಯ ಉದ್ದೇಶ, ಗುರಿಗಳನ್ನೇ ವಿಫಲಗೊಳಿಸುವ ಕೆಲಸ.

ನಾವು ಬೆಡಗಿನ ವಚನಗಳೆಂದು ಕರೆಯುವ ನುಡಿ ಬಗೆಗಳು ಪ್ರಜ್ಞಾಪೂರ್ವಕವಾಗಿ ರಚಿಸಿದ ವಿರೋಧಾಭಾಸಗಳನ್ನು ಒಳಗೊಂಡಿರುತ್ತವೆ–'ಸುಖವ ಬಲ್ಲಾತ ಸುಖಿಯಲ್ಲ' ಅನ್ನುವಂಥವನ್ನು ನೆನೆದುಕೊಳ್ಳಿ. ಅಥವಾ ವಚನಭಂಡಾರಿ ಶಾಂತರಸನ ಈ ವಚನವನ್ನು ನೋಡಿ:

ಕಾಳಮೇಘಮಂದಿರದ ಜಾಳಾಂಧರದ ಮನೆಯಲ್ಲಿ
ಒಬ್ಬ ಸೂಳೆಯ ಬಾಗಿಲಲ್ಲಿ ಎಂಬತ್ತನಾಲ್ಕು ಲಕ್ಷ ಮಿಂಡಗಾರರು.
ಅವಳ ಸಂಗದಲ್ಲಿ ಇರಲಮ್ಮರು
ಅವಳು ತಾವೇ ಬರಲೆಂದು ಕರೆಯದಿಹಳು
ಅವಳಿಗೆ ಯೋನಿ ಹಿಂದು
ಅಂಡ ಮುಂದು
ಕಣ್ಣು ಅಂಗಾಲಿನಲ್ಲಿ
ತಲೆ ಮುಂಗಾಲಿನಲ್ಲಿ
ಕಿವಿ ಭುಜದಲ್ಲಿ





ಕೈ ಮಂಡೆಯ ಮೇಲೆ
ಮೂಗು ಹಣೆಯಲ್ಲಿ
ಮೂಗಿನ ದ್ವಾರ
ಉಂಗುಷ್ಠದಲ್ಲಿ
ಬಸುರು ಬಾಯಲ್ಲಿ
ನಡೆವಳು ತಲೆ ಮುಂತಾಗಿ
ಕಾಲು ಮೇಲಾಗಿ.
ಅವಳ ಕೂಡುವ ಪರಿಯ ಹೇಳಾ,
ಅಲೇಖನಾದ ಶೂನ್ಯನಾಗಿದ್ದೆಯಲ್ಲಾಕಲ್ಲಿನ ಹೊಟ್ಟೆಯ ಮರೆಯಲ್ಲಿ

[ಸಂಪುಟ ೯, ವಚನ ೪೩]

ಇಂಥ ರಚನೆಗಳಲ್ಲಿ ವಿವರವಾದ ಚಿತ್ರಣದೊಂದಿಗೇ ಬೆರೆತು ಕಾಣುವ ವಿರೋಧಾಭಾಸ ತರ್ಕದ ನಿಯಮಗಳನ್ನು ಉಲ್ಲಂಘಿಸುತ್ತದೆ, ಅರ್ಥದ ಕ್ಷೇಮಕರ ವಲಯದಿಂದ ಕೇಳುಗರ ಮನಸ್ಸನ್ನು ಬಿಡುಗಡೆಗೊಳಿಸಿ ಉನ್ನತವಾದ ಒಳನೋಟ, ಜ್ಞಾನಗಳತ್ತ ನಡೆಸುವ ಉದ್ದೇಶ ಹೊಂದಿರುತ್ತದೆ. ತಾವು ನುಡಿಯುತ್ತಿರುವುದು ಅರ್ಥಹೀನ ವಾಕ್ಯವೆಂಬುದು ಅನುಭಾವಿಗೂ ಗೊತ್ತಿರಬಹುದು; ಆದರೂ ಇಂಥ ಅರ್ಥಹೀನ ವಾಕ್ಯಗಳ ಮೂಲಕವೇ ಕೇಳುಗರು ನಾರ್ಮಲ್‌ಗೆ ಅತೀತವಾದ 'ವಾಸ್ತವ'ದೊಡನೆ ಮುಖಾಮುಖಿಯಾಗಲಿ ಎಂಬ ಅಪೇಕ್ಷೆ ಅನುಭಾವಿಗೆ ಇದ್ದೀತು. ಇಂಥ ನುಡಿಗಳಲ್ಲಿ ಕಾಣುವ ಒಂದೊಂದು ಪದಕ್ಕೂ ಧಾರ್ಮಿಕವಾದ, ಮತೀಯವಾದ, ತಾತ್ವಿಕವಾದ ಟೀಕುಗಳನ್ನು ಟಿಪ್ಪಣಿಗಳನ್ನು ಕೊಡಲು ಸಾಧ್ಯವಿದೆ. ಆದರೆ ಇಂಥ ಪ್ರಯತ್ನಗಳು ಬೆಡಗಿನ ನುಡಿಗೆ, ಅನುಭಾವದ ನುಡಿಗೆ ಇರುವ ಮನಃಪರಿವರ್ತನ ಶಕ್ತಿ ಸಾಮರ್ಥ್ಯಗಳನ್ನು ಕಳೆದುಬಿಡುತ್ತವೆ.

ಆದರೂ ಇಂಥ ವ್ಯಾಖ್ಯಾನಗಳೂ ಟೀಕುಗಳೂ ಹುಟ್ಟುವುದು ಅನಿವಾರ್ಯವೆಂದೇ ತೋರುತ್ತದೆ. ಇದಕ್ಕೆ ಎರಡು ಕಾರಣಗಳಿವೆ. ಅನುಭಾವಿಗಳು ಬಳಸುವ ಹೆಸರು ಪದಗಳ ಬೇರು ಆಯಾ ಭಾಷೆ, ಸಂಸ್ಕೃತಿಯಲ್ಲಿ ಆಳವಾಗಿ ಊರಿರುತ್ತವೆ. ಧರ್ಮದ ವಲಯದಲ್ಲಿ ಇಂಥ ಒಂದೊಂದು ಪದವೂ ತನ್ನದೇ ಆದ ಅರ್ಥ ಪರಿವೇಶವನ್ನು ನಿರ್ಮಿಸಿಕೊಂಡಿರುತ್ತದೆ. ಕೋತಿ, ಹಂಸ, ನೀರು, ಬೆಂಕಿ, ಮನೆ ಇಂಥ ಯಾವ ಸಾಮಾನ್ಯವೆನಿಸುವ ಪದವನ್ನಾದರೂ ನೋಡಿ. ಧರ್ಮದ ಭಾಷಿಕವಲಯದಲ್ಲಿ ಅವಕ್ಕೆ ಬೇರೆಯದೇ ಒಂದು ಅರ್ಥ ಪ್ರಾಪ್ತವಾಗಿರುತ್ತದೆ. ಮನವೆಂಬ ಮರ್ಕಟ ಅನ್ನುವಂಥ ನುಡಿ ಎದುರಾದಾಗ ಕೋತಿ ಮನಸ್ಸಿನ ಚಂಚಲತೆಯ ರೂಪವಾಗಿ ಕಾಣುತ್ತದೆ. ಹಾಗೆಂದುಕೊಳ್ಳುತ್ತಿರುವಾಗಲೇ 'ಕೋಡಗವ ಹುಲ್ಲಲಿ ಮುಸುಕಿದಂತೆ ಕೂಡಲಸಂಗಮದೇವಾ ನಿನ್ನ ಪರಿ' ಎಂಬ ನುಡಿ ಕೇಳಿದಾಗ ದಿಗ್ಭ್ರಮೆಯಾಗುತ್ತದೆ. ಮನಸಿನ ಸಂಕೇತವೋ ಪ್ರತಿಮೆಯೋ ಆಗಿದ್ದ ಕೋಡಗ ದೇವರಿಗೆ ಅನ್ವಯವಾದಾಗ ಕೋಡಗ, ಕೋತಿ ಇವುಗಳೆಲ್ಲ ಮನಸ್ಸು ಎಂಬ ಅರ್ಥವನ್ನು ಸೂಚಿಸುತ್ತವೆ ಎಂಬ ಅಂಗೀಕೃತ

ತಿಳಿವಳಿಕೆ ತಲೆಕೆಳಗಾಗುತ್ತದೆ. ಇಂಥ ಅಂಗೀಕೃತ ಅರ್ಥ ಪಲ್ಲಟಗಳು ಅಪರೂಪ. ಬಹಳಷ್ಟು ಬಾರಿ ಅನುಭಾವಿಗಳು ಬಳಸುವ ಪದಗಳಿಗೆ ಇರುವ ಸಾಂಸ್ಕೃತಿಕ, ಧಾರ್ಮಿಕ ಅರ್ಥಪರಿವೇಶದ ಕಾರಣದಿಂದಲೇ ಅವಕ್ಕೆ ಇರುವ ಅರ್ಥ ಸಾಧ್ಯತೆಗಳನ್ನು ಕುರಿತ ನಿಘಂಟುಗಳು–ಬೆಡಗಿನ ಪದಕೋಶದಂಥವು–ಹುಟ್ಟುತ್ತವೆ. ಇದರಿಂದ 'ಅರ್ಥ'ವೊಂದು ಮನಸ್ಸಿನಲ್ಲಿ ಮೂಡಿ ಸಮಾಧಾನವಾಗಬಹುದು; ಚರ್ಚೆ, ವಾಗ್ವಾದಗಳು ಬೆಳೆಯಬಹುದು.

**ನೀರಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ**
**ಬಯಲಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯಾ**
**ಕರ್ಪೂರದ ಪುತ್ಥಳಿಗೆ ಅಗ್ನಿಯ ಸಿಂಹಾಸನವನಿಕ್ಕಿ**
**ಅಗ್ನಿ ಕರಗಿ ಕರ್ಪೂರ ಉಳಿದುದಕ್ಕೆ ಬೆರಗಾದೆನಯ್ಯಾ ಎನ್ನ ಅಜಗಣ್ಣನ ಯೋಗಕ್ಕೆ**

[ಸಂಪುಟ ೫, ವಚನ ೧೧೨೧]

ಮುಕ್ತಾಯಕ್ಕನವರ ಈ ವಚನ ನಮಗೆ ಪರಿಚಿತವಾಗಿರುವ ಅರ್ಥಗಳನ್ನೆಲ್ಲ ನಿರಾಕರಿಸುತ್ತದೆ. ನೀರಿನ ಬೊಂಬೆ ಇರಲು ಸಾಧ್ಯವೇ, ಆ ಬೊಂಬೆಯಕೈಗೆ ಬಯಲ ಬೊಂಬೆಯನ್ನು ಕೊಟ್ಟು ಮುದ್ದಾಡಿಸುವುದು ಇನ್ನೂ ಅದ್ಭುತ. ಕರ್ಪೂರದ ಬೊಂಬೆಗೆ ಬೆಂಕಿಯ ಸಿಂಹಾಸನವೇ! ನೀರ ಬೊಂಬೆ, ಬಯಲ ಬೊಂಬೆ, ಕರ್ಪೂರದ ಬೊಂಬೆ ಅನ್ನುವುದು ಯಾಕೆ? ಕೊನೆಯ ಸಾಲಿಗೆ ಜೀವ ಹೋಗಿ ಶವ ಮಾತ್ರ ಉಳಿದದ್ದು ಕಂಡು ಬೆರಗಾದೆ ಎಂದು 'ಸಮರ್ಪಕವಾಗಿ' ಅರ್ಥವನ್ನು ಹೇಳಬಹುದಾದರೂ ಬೆಂಕಿ ಉರಿದು ಕರ್ಪೂರ ಉಳಿಯಿತು ಅನ್ನುವ ಮಾತಿನ ಬೆರಗು ಅದರಿಂದ ಇಲ್ಲವಾಗುತ್ತದಲ್ಲವೇ? ಅನುಭಾವದ ನುಡಿಗಳು ಅರ್ಥಕ್ಕಲ್ಲ, ಕೇಳುಗರು ಮನಸ್ಸಿನಲ್ಲಿ ಅನುಭಾವಿಗೆ ಆದ ಅನುಭವವನ್ನೇ ಮರುಸೃಷ್ಟಿ ಮಾಡಿಕೊಳ್ಳುವುದು ಮುಖ್ಯ ಎಂಬ ನೆಲೆಯಿಂದ ಮೂಡಿದವಾಗಿರುತ್ತವೆ.

ಅರ್ಥದ ನಿರಾಕರಣೆಯೇಅನುಭಾವದ ಭಾಷೆಯ ಮುಖ್ಯ ಲಕ್ಷಣ. ನಿರಾಕರಣೆಗೊಳ್ಳುವ ಅರ್ಥವನ್ನು ಅರ್ಥವಿರುವ ಪದದ ಮೂಲಕವಲ್ಲದೆ ಬೇರೆ ರೀತಿ ವ್ಯಕ್ತಪಡಿಸಲಾಗದು ಅನ್ನುವುದು ಭಾಷೆಯ ಅನುಲ್ಲಂಘನೀಯ ನಿಯಮವೇ ಸರಿ!

[ಮುಂದುವರೆಯುವುದು]

□

ನೆನೆಯಲರಿಯೆ ನಿರ್ಧರಿಸಲರಿಯೆ ಮನವಿಲ್ಲವಾಗಿ
ಭಾವಿಸಲರಿಯೆ ಬೆರಸಲರಿಯೆ ಭಾವ ನಿರ್ಭಾವವಾಯಿತ್ತಾಗಿ
ಧ್ಯಾನ ಮೌನವನರಿಯೆ ಧ್ಯಾನಾತೀತ ತಾನೆಯಾಯಿತ್ತಾಗಿ
ಜ್ಞಾತೃ ಜ್ಞಾನ ಜ್ಞೇಯಂಗಳೆಲ್ಲವ ಮೀರಿ
ಅಭಿನವ ಮಲ್ಲಿಕಾರ್ಜುನನಲ್ಲಿ ಪರಮ ಸುಖಿಯಾಗಿರ್ದೆ
– ಡೋಹರ ಕಕ್ಕಯ್ಯ





## ವಚನ–ವೈಚಾರಿಕತೆ–ವೈಜ್ಞಾನಿಕ ಮನೋಭಾವ

**ಸುಮಂಗಲಾ ಎಸ್. ಮುಮ್ಮಿಗಟ್ಟಿ**

ಇತ್ತೀಚಿನ ದಿನಗಳಲ್ಲಿ "ಸಾವು" ಅಥವಾ "ಮರಣ" ಮತ್ತೆ ಮತ್ತೆ ಚರ್ಚೆಯ ವಿಷಯವಾಗುತ್ತಿದೆ. ಸಾಮಾಜಿಕ ಮಾಧ್ಯಮಗಳಲ್ಲಿ ಸಹ ಇದು ಬಹು ಜನರನ್ನು ಆಕರ್ಷಿಸುತ್ತಿರುವುದನ್ನು ನೋಡುತ್ತಿದ್ದೇವೆ. ಇದರ ಜೊತೆಜೊತೆಗೇ, ದೊಡ್ಡ ದೊಡ್ಡ ಖ್ಯಾತನಾಮರುಗಳು ಮರಣ ಹೊಂದಿದಾಗ, ಅವರ ಆತ್ಮದ ಜೊತೆಗೆ ಸಂವಾದಗಳನ್ನು ನಡೆಸಿದ ಧ್ವನಿಮುದ್ರಣಗಳು ಸಹ ಸಾಮಾಜಿಕ ಜಾಲತಾಣಗಳಲ್ಲಿ ಓಡಾಡುತ್ತಿರುವುದನ್ನು ನಾವೆಲ್ಲ ನೋಡಿದ್ದೇವೆ. ಸಾವು ಎಂಬ ಪದವೇ ಕೆಲವರ ಎದೆ ನಡುಗಿಸಿದರೆ, ಶರಣರು ಮಾತ್ರ "ಮರಣವೇ ಮಹಾನವಮಿ" ಎಂದರು. ಇವೆಲ್ಲದರ ಹಿನ್ನೆಲೆಯಲ್ಲಿ ಇದೇ ವಿಷಯವನ್ನು ಕುರಿತ ಚರ್ಚೆ ಈ ಲೇಖನದಲ್ಲಿ.

ವಿಜ್ಞಾನ "ಮರಣ" ವನ್ನು ಜೀವಿಯಲ್ಲಿ ನಡೆಯುವ ಒಂದು ಸಹಜ ಪ್ರಕ್ರಿಯೆಯಾಗಿದ್ದು, ಇದಾದ ನಂತರ ಜೀವಿಯ ಎಲ್ಲ ಚಟುವಟಿಕೆಗಳು ತಟಸ್ಥವಾಗುತ್ತವೆ. ಹಾಗೂ ಕ್ರಮೇಣ ದೇಹದ ಎಲ್ಲ ಅಂಗಾಂಗಗಳು, ವಿಘಟನೆಗೊಳ್ಳುತ್ತಾ ಹೋಗಿ ಕೊನೆಗೆ ನಿಸರ್ಗದ ಒಂದು ಭಾಗವಾಗಿ ಹೋಗುತ್ತವೆ. ಅದಾದ ನಂತರ ಏನೂ ಉಳಿಯುವುದಿಲ್ಲ. ಹಾಗೆಂದು ನಷ್ಟವೂ ಆಗುವುದಿಲ್ಲ. ವಿಜ್ಞಾನದ ನಿಯಮದಂತೆ, "ಯಾವುದೇ ವಸ್ತು ಸಂಪೂರ್ಣವಾಗಿ ನಷ್ಟವಾಗುವುದು ಸಾಧ್ಯವಿಲ್ಲ. ಬದಲಾಗಿ ಅದು ರೂಪ ಬದಲಿಸುತ್ತದೆ, ಅಷ್ಟೆ" ಹಾಗೆಯೇ, ಜೀವಿಯ ಎಲ್ಲ ಅಂಗಾಂಗಗಳು ಪಂಚಭೂತಗಳಲ್ಲಿ ಒಂದಾಗಿ ವಿಲೀನವಾಗುತ್ತವೆ ಮತ್ತು ಅದರ ಒಂದು ಭಾಗವಾಗುತ್ತವೆ. ಇದೇ ತತ್ವವನ್ನು ಮಾನವನಿಗೆ ಅನ್ವಯಿಸಿ ನೋಡಿದಾಗ, ಎಲ್ಲರೊಂದಿಗೆ ಜೈವಿಕವಾಗಿ ಇದ್ದ ವ್ಯಕ್ತಿ ಯಾವುದೇ ಚಟುವಟಿಕೆಗಳನ್ನು ತೋರಿಸದೆ, ಉಸಿರು ನಿಲ್ಲಿಸುವುದನ್ನು, ಹೃದಯದ ಬಡಿತ ನಿಂತುಹೋಗುವುದನ್ನು ನೋಡಿದಾಗ, ವ್ಯಕ್ತಿ ಮರಣಹೊಂದಿದ್ದಾನೆ ಎನ್ನುತ್ತಾರೆ. ವೈದ್ಯರು ಹಲವು ಬಾರಿ "ಬ್ರೇನ್ ಡೆಡ್" ಅಥವಾ "ಮಿದುಳು ಸತ್ತುಹೋಗಿದೆ" ಎನ್ನುವುದನ್ನು ನಾವು ಕೇಳಿದ್ದೇವೆ. ಹಾಗೆಂದರೆ,–– ವ್ಯಕ್ತಿಯ ಎದೆಬಡಿತ ನಿಂತ ಮೇಲೂ ಸುಮಾರು ಹತ್ತು ನಿಮಿಷಗಳ ಕಾಲ ಜೀವಂತವಾಗಿದ್ದು ನರಕೋಶಗಳು ಕ್ರಿಯಾಶೀಲವಾಗಿರುತ್ತವೆ. ಹಲವು ಬಾರಿ ಹೃದಯದ ಬಡಿತ ಯಂತ್ರಗಳ ಸಹಾಯದಿಂದ ನಡೆಯುತ್ತಿದ್ದರೂ, ವೆಂಟಿಲೇಟರುಗಳ ಸಹಾಯದಿಂದ ಉಸಿರಾಡುತ್ತಿದ್ದರೂ ವೈದ್ಯರು ವ್ಯಕ್ತಿಯ ಮಿದುಳು ನಿಷ್ಕ್ರಿಯವಾಗಿದೆ ಎನ್ನುತ್ತಾರೆ. ಮರಣದ ನಂತರ ದೇಹದ

ನಂ. 302/25, ಜೀನುಕಲ್ ಪ್ಯಾರಡೈಸ್, ಪೈಪ್‌ಲೈನ್ ರಸ್ತೆ, ಕರ್ನಾಟಕ ಲೇಔಟ್,
1ನೇ ಹಂತ, ಬೆಂಗಳೂರು – 560 086 94810 35983

ಮಾಂಸಖಂಡಗಳಲ್ಲಿ ನಡೆವ "ರಿಗರ್ ಮಾರ್ಟಿಸ್" ಎನ್ನುವ ಕ್ರಿಯೆ ಅವುಗಳ ನಮ್ಯತೆಯನ್ನು ನಾಶಪಡಿಸಿ ದೇಹ ಸೆಟೆಯುವಂತೆ ಮಾಡುತ್ತವೆ. ಅಸ್ಥಿಪಂಜರ ಬಿಗಿದುಕೊಳ್ಳುತ್ತದೆ. ದೇಹ ಉಷ್ಣತೆಯನ್ನು ಕಳೆದುಕೊಂಡು ಶೀತಲವಾಗುತ್ತದೆ. ಕೆಲವೊಮ್ಮೆ ವ್ಯಕ್ತಿಗಳು ಸಾವಿನಂಚನ್ನು ತಲುಪಿ ಬಂದೆವೆಂದೂ, ಆ ಅವಧಿಯ ಅನುಭವನ್ನು ಬಗೆಬಗೆಯಾಗಿ ಹಂಚಿಕೊಳ್ಳುವುದನ್ನೂ ನಾವೆಲ್ಲ ಓದಿದ್ದೇವೆ, ಕೇಳಿದ್ದೇವೆ. ಈ ಭೂಮಿಯ ಮೇಲೆ ನಾನು ಶಾಶ್ವತವಾಗಿ ಇರುತ್ತೇನೆ ಎಂದೇ ಭಾವಿಸಿ ಬದುಕುವ ಮಾನವನಿಗೆ ಅದೆಲ್ಲವನ್ನೂ ತೊರೆದು ಹೋಗಬೇಕಾದ ಪ್ರಕ್ರಿಯೆಯೇ ಈ "ಮರಣ" ಎಂದಾಗ, ಸಹಜವಾಗಿಯೇ, ಭೀತಿ, ಬೇಸರ ಉಂಟಾಗುತ್ತದೆ.

ಹಾಗಾದರೆ ಶರಣರಿಗೆ ಹೇಗೆ–

**ನಾಳೆ ಬಪ್ಪುದು ನಮಗಿಂದೇ ಬರಲಿ**
**ಇಂದು ಬಪ್ಪುದು ನಮಗೀಗಲೇ ಬರಲಿ**
**ಇದಕಾರಂಜುವರು ಇದಕಾರಳುಕುವರು**
**'ಜಾತಸ್ಯ ಮರಣಂ ಧ್ರುವಂ' ಎಂಬುದಾಗಿ**
**ನಮ್ಮ ಕೂಡಲಸಂಗಮದೇವರು ಬರೆದ ಬರೆಹವ ತಪ್ಪಿಸುವಡೆ**
**ಹರಿಬ್ರಹ್ಮಾದಿಗಳಿಗಳವಲ್ಲ**

ಎಂದು ಹೇಳುವುದು ಸಾಧ್ಯವಾಯಿತು ಎಂದು ಯೋಚಿಸಿದಾಗ ಅಚ್ಚರಿಯಾಗುತ್ತದೆ. ಅವರು ಇಂದನ್ನು ನಂಬಿದವರು, ಸಂಗ್ರಹವನ್ನು ದ್ವೇಷಿಸಿದವರು. ಜೀವವಿದ್ದಾಗಲೇ ನಿಜದರಿವ ಕಂಡವರು, ಈ ತನುವಿರುವುದೇ ಆ ಅನುಪಮ ಸಾಮರಸ್ಯಕ್ಕಾಗಿ. ಹಾಗಾಗಿ ಇಲ್ಲಿರುವಾಗಲೇ ದೇವನನ್ನು ಒಳಗೊಳ್ಳಬೇಕು ಎನ್ನುವ ಧ್ಯೇಯವಿಟ್ಟುಕೊಂಡು ಬಂದವರು. ಅದರಂತೆ ನುಡಿದವರು ಹಾಗೂ ನುಡಿದು ನಡೆದವರು. ಜೀವನದ ನೈಷ್ಠಿಕ ಆಚರಣೆಯಲ್ಲಿಯೇ ಸುಖವನ್ನು ಕಂಡುಕೊಂಡವರು.

**ದೇವಲೋಕ ಮರ್ತ್ಯಾಲೋಕವೆಂಬುದು ಬೇರಿಲ್ಲ ಕಾಣಿರೋ!**
**ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ.**
**ಆಚಾರವೇ ಸ್ವರ್ಗ, ಅನಾಚಾರವೇ ನರಕ.**
**ಕೂಡಲಸಂಗಮದೇವಾ, ನೀವೇ ಪ್ರಮಾಣು.**

ಎಂದು ಬಸವಣ್ಣನವರು ಬೇರೊಂದು ಲೋಕದ ಅಸ್ತಿತ್ವವನ್ನೇ ತೊಡೆದು ಹಾಕುವುದರ ಜೊತೆಗೆ, ಮೃತ್ಯು ಮುಟ್ಟದ ಮುನ್ನ ಕೂಡಲ ಸಂಗಮದೇವನನ್ನು ಪೂಜಿಸು ಎನ್ನುತ್ತಾರೆ. ಸಾವಿನ ನಂತರದ ಬದುಕನ್ನಾಗಲೀ, ಎಲ್ಲಿಯೋ ಇರುವ ಇನ್ನೊಂದು ಲೋಕವನ್ನಾಗಲೀ ಶರಣರು ಒಪ್ಪುವುದಿಲ್ಲ. ಅಲ್ಲಮಪ್ರಭುಗಳು ತಮ್ಮ ಒಂದು ವಚನದಲ್ಲಿ ಮತ್ತೂ ಮುಂದೆ ಹೋಗಿ.

**ಸತ್ತು ಮುಂದೆ ದೇವರ ಕೂಡುವುದುಳ್ಳಡೆ,**
**ಸಾಯಲೇಬೇಕು. ಹಿಂದೆ ನೋಯಲೇಕಯ್ಯಾ ?**





**ತಮ್ಮಿಂದ ತಾವು ಸತ್ತು, ನಿಮ್ಮ ಮೇಲೆ ಇಡುವರು.**
**ಲೋಕದ ದುರ್ಜನವ ಹೊತ್ತೆ ಕಾಣಾ ಗುಹೇಶ್ವರಾ**

ಸತ್ತ ಮೇಲೆ ದೇವರನ್ನು ಸೇರುವುದೇ ನಿಜವಾದರೆ, ಸಾಯಲೇಬೇಕು. ಅದಕ್ಕೆ ಏಕೆ ನೋಯುವುದು? ಎಂದು ಚಾಟಿಯನ್ನು ಬೀಸುತ್ತಾರೆ. ಅವರದೇ ಮತ್ತೊಂದು ವಚನದಲ್ಲಿ ಹೀಗಿದೆ–

**ಸತ್ತು ಮುಂದೆ ದೇವರ ಕೂಡಿಹೆವೆಂಬಿರಿ,**
**ಸಾಯದ ಮುನ್ನ ಸತ್ತಿಪ್ಪಿರಿ.**
**ಎಂತಯ್ಯಾ ನಿಮ್ಮ ಲಿಂಗೈಕ್ಯದ ಪರಿ?**
**ಎಂತಯ್ಯಾ ನಿಮ್ಮ ಪ್ರಮಥರ ಪರಿ?**
**ಅಂಗದ ಅವಸ್ಥೆಯಲ್ಲದೆ ಲಿಂಗದ ಅವಸ್ಥೆ ಆರಿಗೂ ಇಲ್ಲ**
**ಗುಹೇಶ್ವರಾ**

ಎಂದರೆ, ಶರಣ ಲದ್ದೆಯ ಸೋಮ,

**ಆವ ಕಾಯಕವಾದಡೂ ಸ್ವಕಾಯಕವ ಮಾಡಿ**
**ಗುರು ಲಿಂಗ ಜಂಗಮದ ಮುಂದಿಟ್ಟು,**
**ಒಕ್ಕುದ ಹಾರೈಸಿ, ಮಿಕ್ಕುದ ಕೈಕೊಂಡು**
**ವ್ಯಾಧಿ ಬಂದಡೆ ನರಳು, ಬೇನೆ ಬಂದಡೆ ಒರಲು,**
**ಜೀವ ಹೋದಡೆ ಸಾಯಿ, ಇದಕ್ಕಾ ದೇವರ ಹಂಗೇಕೆ,**
**ಭಾಪು ಲದ್ದೆಯ ಸೋಮಾ?**

ದೇವರ ಹಂಗೇ ಇಲ್ಲದೆ, ಸಾವು ರೋಗಗಳಿಗೆ ಅಂಜದೇ, ಸ್ವಂತದ ಕಾಯಕವನ್ನು ಮಾಡಿ ಜೀವಿಸಬೇಕು ಎನ್ನುವ ಧೈರ್ಯವನ್ನೂ, ಬದುಕು ಮತ್ತು ಸಾವಿನ ಬಗೆಗಿನ ನಿರಾಳತೆಯನ್ನೂ ಇಲ್ಲಿ ಕಾಣಬಹುದು.

ವೀರ ವಿರಾಗಿಣಿ ಮಹದೇವಿಯಕ್ಕ, "ಯಾವ ವಿದ್ಯೆಯನ್ನು ಕಲಿತರೇನು? ಸಾವ ವಿದ್ಯೆ ಬೆನ್ನು ಬಿಡುವುದಿಲ್ಲ" ಎನ್ನುತ್ತಾ, ನೆಲವೇ ತಳವಾರನಾದೊಡೆ, ಕಳ್ಳನಾದವನು ಹೇಗೆ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೋ ಹಾಗೆ ಸಾವು ಯಾರನ್ನೂ ಬಿಡುವುದಿಲ್ಲ ಎನ್ನುತ್ತಾಳೆ.

**ಆವ ವಿದ್ಯೆಯ ಕಲಿತಡೇನು**
**ಸಾವ ವಿದ್ಯೆ ಬೆನ್ನ ಬಿಡದು.**
**ಅಶನವ ತೊರೆದಡೇನು, ವ್ಯಸನವ ಮರೆದಡೇನು**
**ಉಸುರ ಹಿಡಿದಡೇನು, ಬಸುರ ಕಟ್ಟಿದಡೇನು**
**ಚೆನ್ನಮಲ್ಲಿಕಾರ್ಜುನದೇವಯ್ಯಾ**
**ನೆಲ ತಳವಾರನಾದಡೆ ಕಳ್ಳನೆಲ್ಲಿಗೆ ಹೋಹನು?**

ಅಕ್ಕ ತನ್ನ ಮತ್ತೊಂದು ವಚನದಲ್ಲಿ

**ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ನಾನೊಲಿದೆ.**
**ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ**
**ಚೆಲುವಂಗೆ ನಾನೊಲಿದೆ ಎಲೆ ಅವ್ವಗಳಿರಾ ?**
**ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ ನಾನು.**
**ಸೀಮೆಯಿಲ್ಲದ ನಿಸ್ಸೀಮಂಗೊಲಿದೆ ನಾನು.**
**ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆ ಮಿಗೆ ಒಲಿದೆ ಎಲೆ ಅವ್ವಗಳಿರಾ.**

ಎನ್ನುತ್ತಾ, "ಸಾವ ಕೆಡುವ ಗಂಡರನು ಒಲೆಯೊಳಗಿಕ್ಕು" ಎನ್ನುವಲ್ಲಿ ಸಾವು ಉಂಟು ಮಾಡುವ ನಶ್ವರತೆಯನ್ನು ಸಾರಿ ಹೇಳುತ್ತಾಳೆ ಮತ್ತು ಅಂತಹದೊಂದು ಪ್ರಕ್ರಿಯೆಗೆ ಒಳಗಾಗುವ ಪತಿ ನನಗೆ ಬೇಡ ಎನ್ನುವಲ್ಲಿ ಆಕೆಗಿರುವುದು ಚೆನ್ನಮಲ್ಲಿಕಾರ್ಜುನನ ಬಗೆಗಿನ ಅನನ್ಯ ಭಕ್ತಿಯೇ ಹೊರತು ಸಾವಿನಿಂದುಂಟಾಗುವ ಅಗಲಿಕೆಯ ಭೀತಿಯಲ್ಲ.

ಶರಣ ಹಡಪದ ಅಪ್ಪಣ್ಣ, ಬಿಡದ ಸಾವಿಗೂ ದೇವನಿಗೂ ಯಾವ ನಂಟೂ ಇಲ್ಲ ಎನ್ನುತ್ತಾನೆ.

**ಸಾವಾಗ ದೇವನೆಂದರೆ, ಸಾವು ಬಿಡುವುದೇ?**
**ಇದಾವ ಮಾತೆಂದು ನುಡಿವಿರಿ.**
**ಎಲೆಯಣ್ಣಗಳಿರಾ, ಬಾಳುವಲ್ಲಿ, ಬದುಕುವಲ್ಲಿ,**
**ಗುರು ಲಿಂಗ ಜಂಗಮವನರಿಯದೆ,**
**ಹಾಳುಹರಿಯ ತಿಂದ ಶುನಕನಂತೆ ಕಾಲ್ಗೆಡೆದು ಓಡಾಡಿ ಏಳಲಾರದೆ ಬಿದ್ದಾಗ,**
**ಶಿವ ಶಿವ ಎಂದರೆ, ಅಲ್ಲಿ ದೇವನಿಪ್ಪನೆಂದು ಇದ ನೋಡಿ ನಾಚಿ ನಗುತಿರ್ದೆ,**
**ನಮ್ಮ ಬಸವಪ್ರಿಯ ಕೂಡಲಚೆನ್ನಬಸವಣ್ಣಾ**

ಎನ್ನುತ್ತಾನೆ. ಈ ರೀತಿ ಸಾವು ಎಂದರೆ ಮನುಷ್ಯನ ಯಾವುದೇ ಜೈವಿಕ ಕ್ರಿಯೆಯಂತೆ ಸಹಜವಾದದ್ದು. ಅದರ ನಂತರ ಮತ್ತೇನೋ ಇದೆ ಎನ್ನುವ ಭಾವನೆ ತಪ್ಪು ಎನ್ನುವ ಶರಣರು ಸಾವನ್ನೂ ಸಹ ಸಹಜವಾಗಿ ಸ್ವಾಗತಿಸುತ್ತಾರೆ. ಅದಕ್ಕೇ ಇರಬೇಕು ಶರಣರ ಗುಣವನ್ನು ಮರಣದಲ್ಲಿ ನೋಡು ಎನ್ನುವುದು.

ವಿಜ್ಞಾನವು ಸಾವಿನ ನಂತರ ಮತ್ತೇನೋ ಇದೆ ಎನ್ನುವುದನ್ನು ಒಪ್ಪುವುದಿಲ್ಲ. ಹಾಗಾದರೆ ಕೆಲವು ವ್ಯಕ್ತಿಗಳು ವರ್ಣಿಸುವ ಸಾವಿನ ನಂತರದ ಅನುಭವಗಳು! ಆತ್ಮದ ಜೊತೆಗಿನ ಮಾತು ಕತೆಗಳು ಏನು? ಮನೋವಿಜ್ಞಾನಿಗಳ ಪ್ರಕಾರ ಅವೆಲ್ಲ ಮನಸ್ಸಿನ ವಿವಿಧ ಸ್ತರಗಳಲ್ಲಿ ಅವಿತು ಕುಳಿತ ಭಾವನೆಗಳು ಮಾತ್ರ. ಕನಸು ಕಂಡಂತೆ. ಈ ಹಿನ್ನೆಲೆಯಲ್ಲಿ ಶರಣರು ಹೇಳುವ ಬಾಳುವಲ್ಲಿ ಬದುಕುವಲ್ಲಿ ದೇವನ ನೆನೆದು ಬದುಕಿ ಹೋಗಬೇಕು ಎನ್ನುವ ಮಾತು ಅದೆಷ್ಟು ಸತ್ಯ!








**STATEMENT OF OWNER SHIP-PARTICULARS ABOUT**
**'MAHAMANE' FORM-IV (SEE RULE 5)**

Place of Publication : **Akhila Bharatha Sharana Sahitya Parishat (Regd.),**
Jagadguru Sri Shivarathreeswara Circle
1st Main, 8th Block, Jayanagar
Bengaluru – 560 070

Periodicity of its Publication : Monthly

Printer's Name : **Sathyasri Printers Pvt Ltd.**

Whether Citizen of India : Indian

Address : No.16/1, 3rd Cross, 2nd Main Road
Kasturiba Nagar, Bengaluru - 560 026

Publisher's Name : Go.Ru. Channabasappa

Whether Citizen of India : Indian

Address : President
Akhila Bharatha Sharana Sahitya Parishat (Regd.),
Jagadguru Sri Shivarathreeswara Circle
1st Main, 8th Block, Jayanagar, Bengaluru – 560 070

Editor Name : Dr. M.S. Ashadevi

Nationality : Indian

Address : Editor, 'Mahamane'
Akhila Bharatha Sharana Sahitya Parishat (Regd.),
Jagadguru Sri Shivarathreeswara Circle
1st Main, 8th Block, Jayanagar, Bengaluru – 560 070

I Go.Ru. Channabasappa hereby declare that the particulars given above are true to the best of my knowledge and belief.

(Sd/-)
**(Go.Ru. Channabasappa)**
Signature of Publisher

Bengaluru
Date: 05.03.2022

# ಕ್ಷೇತ್ರ ವಾರ್ತೆಗಳು




ಮುದ್ದೇಬಿಹಾಳ: ಲಿಂ.ಪರಮಾನಂದ ಸಂ. ಮಸ್ಕಿ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೨೩.೦೧.೨೦೨೨
ಚಿತ್ರದಲ್ಲಿ: ಪ್ರಭುಲಿಂಗ ಕಡಿ, ಬಾಪುಗೌಡ ಪಾಟೀಲ, ಎ.ಎಸ್. ಪಟ್ಟಣಶೆಟ್ಟಿ, ಎಸ್.ಬಿ. ಬಂಗಾರಿ, ಇಮಾಮುದ್ದೀನ ಅತ್ತಾರ, ಮಹಾದೇವಿ ಮಸ್ಕಿ, ಸಿ.ಜಿ. ನಾಗರಾಳ, ಸಂಗನಗೌಡ ಬಿರಾದಾರ, ಶಂಭುಲಿಂಗಪ್ಪ ದುದ್ದಗಿ



ವಿಜಯಪುರ ಮುದ್ದೇಬಿಹಾಳ: ಲಿಂ.ಮರುಳಸಿದ್ದಯ್ಯ ನಾಗಯ್ಯ ಗುರುವಿನ ದತ್ತಿ ಉಪನ್ಯಾಸ, ದಿನಾಂಕ:೨೮.೦೧.೨೦೨೨
ಚಿತ್ರದಲ್ಲಿ: ಸವಿತಾ ಮರುಳಸಿದ್ದಯ್ಯ ಒಡೆಯರ, ಎನ್.ಆಯ್. ಬೋರಡ್ಡಿ, ಎಚ್.ಎಲ್. ತೋಳಮಟ್ಟಿ, ಕೆ.ಎಸ್. ಚಿಮ್ಮಲಗಿ, ಎಸ್.ಬಿ. ಬಂಗಾರಿ, ಬಸವರಾಜ ನಾಲತವಾಡ, ಸವಿತಾ ಒಡೆಯರ, ವಾಯ್.ಎ. ಬೋಳಿ, ಬಾಪುಗೌಡ ಪಾಟೀಲ, ರಾಮನಗೌಡ ಪಾಟೀಲ್, ಗಂಗಾಧರ ಪತ್ತಾರ, ಪಿ.ಎ. ಬಾಳಕಾಯಿ, ಜೆ.ಎಸ್. ರಜಪೂತ



ತಾಳಿಕೋಟಿ ತಾಲೂಕಾ ಕದಳಿ ವೇದಿಕೆ: ಶಿವಯೋಗಿ ಸಿದ್ಧರಾಮೇಶ್ವರ ಹಾಗೂ ಅಂಬಿಗರ ಚೌಡಯ್ಯನವರ ಜಯಂತಿ
ದಿನಾಂಕ: ೩೦.೦೧.೨೦೨೨ ಚಿತ್ರದಲ್ಲಿ: ಸಂಗೀತಾ ಬಳಗಾನೂರ, ಶಿವಲಿಂಗಮ್ಮ ಬಳಗಾನೂರ, ಉಮಾ ಫಿವಾರಿ, ಶಕುಂತಲಾ ಹಿರೇಮಠ, ಉಮಾ ಸಾಲಂಕಿ







ಬಳ್ಳಾರಿ: ಲಿಂ. ಶ್ರೀ ಫಕೀರಪ್ಪ ತಲವಾರ್ ದತ್ತಿ ಮತ್ತು ಲಿಂ. ಶ್ರೀ ಬಿ.ಎಂ. ಬಸವರಾಜ ದತ್ತಿ ಉಪನ್ಯಾಸ,
ದಿನಾಂಕ: ೨೯.೧.೨೦೨೨ ಚಿತ್ರದಲ್ಲಿ: ಸಿದ್ಧಲಿಂಗಪ್ಪ, ಅಮಾತಿ ಬಸವರಾಜ, ಕೆ.ಬಿ. ಸಿದ್ಧಲಿಂಗಪ್ಪ, ಸತ್ಯನಾರಾಯಣ



ಗುಬ್ಬಿ ತಾಲೂಕು: ಶರಣೆ ಲಿಂ.ಗೌರಮ್ಮ ಮತ್ತು ಶರಣ ಲಿಂ.ಬಸವಯ್ಯ ಸ್ಮರಣಾರ್ಥ ದತ್ತಿ ಉಪನ್ಯಾಸ,
ದಿನಾಂಕ: ೧೦.೨.೨೦೨೨ ಚಿತ್ರದಲ್ಲಿ: ಎಂ. ರಾಮಯ್ಯ, ರೇಣುಕಾ ಪ್ರಸಾದ್, ಜಯಣ್ಣ ಮಾದಾಪುರ ಶಿವಪ್ಪ, ವಿದ್ವಾನ್ ಎಂ.ಜಿ ಸಿದ್ದರಾಮಯ್ಯ, ಅಪ್ಪಾಜಿ



ವಿಜಯಪುರ: ಲಿಂ. ಡಾ.ಫ ಗು. ಹಳಕಟ್ಟಿ, ಲಿಂ. ಹರ್ಡೇಕರ್ ಮಂಜಪ್ಪ ಹಾಗೂ ಲಿಂ. ವೀರಪ್ಪ ಕತಕನಹಳ್ಳಿ ದತ್ತಿ ಉಪನ್ಯಾಸ,
ದಿನಾಂಕ:೨೮.೦೧.೨೦೨೨ ಚಿತ್ರದಲ್ಲಿ: ಡಾ.ಎಂ.ಎಸ್. ಮದಭಾವಿ, ಭೀಮಪ್ಪ ಕತಕನಹಳ್ಳಿ, ಸಾಹೇಬಗೌಡ ಬಸರಕೋಡ, ಬಿ.ಎಸ್.ಬಾಪಗೊಂಡ, ಜಂಬುನಾಥ್ ಕಂಚ್ಯಾಣಿ




ಸಿಂಧಗಿ: ಲಿಂ. ಪಿ. ಮುನಿಕುಮಾರ ಸ್ಮರಣಾರ್ಥ ದತ್ತಿ ಉಪನ್ಯಾಸ, ದಿನಾಂಕ:೨೮.೧೧.೨೦೨೨ ಚಿತ್ರದಲ್ಲಿ: ಚನ್ನಪ್ಪ ಕತ್ತಿ,
ಶ್ರೀಶೈಲ ಯಳಮೇಳಿ, ಶಿವಪ್ಪ ಆರ್. ಗವಸಾನೆ, ಮಹಾದೇವಿ ಎಸ್. ಗವಸಾನೆ, ಚನ್ನಪ್ಪ ರೋಡಗಿ, ಸಿ.ಕೆ. ಕಟ್ಟಿ,
ಡಾ. ಎಂ.ಎಂ. ಪಡಶೆಟ್ಟಿ, ಶಿವಕುಮಾರ ಗು. ಶಿವಸಿಂಪಿ, ಕಲ್ಲಪ್ಪ ತಾರಾಪುರಿ



ಬಸವನ ಬಾಗೇವಾಡಿ: ಲಿಂ. ಸೋಮಪ್ಪ ಹೆಬ್ಬಾಳ ಲಿಂ. ಶಿದ್ರಾಮಪ್ಪ ಕನ್ನೂರ, ಸಾ ಕುದರಿ ಸಾಲವಾಡಗಿ ದತ್ತಿ ಉಪನ್ಯಾಸ
ದಿನಾಂಕ: ೧೯.೨.೨೦೨೨ ಚಿತ್ರದಲ್ಲಿ: ಸಂಗನಗೌಡ ಪಾಟೀಲ, ವೀರಣ್ಣ ಮರ್ತುರ, ಭೀಮಾಶಂಕರ ಶರಣರು, ಅಶೋಕಗೌಡ
ಪಾಟೀಲ, ರಾಜೂಗೌಡ ಪಾಟೀಲ, ಬಸಣ್ಣ ಬಾಗೇವಾಡಿ, ಶ್ರೀಶೈಲ ಮಂಗಳವಾಡಿ, ಮಲ್ಲಣ್ಣ ಅಣ್ಣಪ್ಪನವರ, ಮಾದೇವಪ್ಪ ಸಜ್ಜನ,
ಎಂ.ಎಸ್. ಕಲಾದಗಿ, ಆರ್.ಜಿ. ಅಳ್ಳಗಿ, ವಿವೇಕಾನಂದ ಕಲ್ಯಾಣ ಶೆಟ್ಟಿ, ಶಾಂತ ವೀರಪ್ಪ, ಸಂತೋಷ ಕನ್ನೂರ, ಮಲ್ಲಣ್ಣ ಕನ್ನೂರ



ಬೀದರ್: ವೀರ ಗಣಾಚಾರಿ ಮಡಿವಾಳ
ಮಾಚಿದೇವರ ಜಯಂತಿ ಆಚರಣೆ,
ದಿನಾಂಕ: ೨೧.೦೨.೨೦೨೨
ಚಿತ್ರದಲ್ಲಿ: ಅಶೋಕ ತಾಂಬೊಳೆ, ಪ್ರೊ
ಶಂಭುಲಿಂಗ ವಿ. ಕಾಮಣ್ಣ, ವಸಂತರಾವ
ಹುಣಸನಾಳೆ, ಸಂತೋಷ ಹಡಪದ







ಶಹಾಪುರ: ದೇಸಾಯಿಗೌಡ ಮತ್ತು ಮಡಿವಾಳಪ್ಪಗೌಡ ಪೋಲೀಸ್ ಪಾಟೀಲ ದರ್ಶನಾಪುರ ದತ್ತಿ ಉಪನ್ಯಾಸ
ದಿನಾಂಕ: ೧೧.೯.೨೦೨೧ ಪೂಜ್ಯ ಶ್ರೀ ರುದ್ರಪಶುಪತಿ ಸ್ವಾಮಿಗಳು, ಡಾ. ಗೊ.ರು. ಚನ್ನಬಸಪ್ಪ,
ಚಂದ್ರಶೇಖರ ಅರಬೋಳ, ಸಿದ್ದಪ್ಪ ಎಸ್. ಹೊಟ್ಟಿ, ಎಸ್.ಬಿ. ಅಂಗಡಿ, ಬಾಪುಗೌಡ ಪಾಟೀಲ,
ಡಾ. ದಯಾನಂದ ಅಗಸರ, ಲಿಂಗಣ್ಣ ಪಡಶೆಟ್ಟಿ




ಚಿಂಚೋಳಿ: ಲಿಂ. ಷಣ್ಮುಖಮ್ಮ ಹಾಗೂ ಲಿಂ.ಕಾಶಪ್ಪ ಶಿಕ್ಕರಗೋಳ ದತ್ತಿ ಉಪನ್ಯಾಸ ದಿನಾಂಕ: ೨೦.೦೨.೨೦೨೨
ಡಾ. ಶಿವರಂಜನ್ ಸತ್ಯಂಪೇಟೆ, ಡಾ. ಮಲ್ಲಿಕಾರ್ಜುನ ವಡ್ಡನಕೇರಿ, ಬಸವರಾಜ ಐನೋಳಿ,
ನಾಗರಾಜ ಕಲಬುರಗಿ, ಚನ್ನವೀರ ಕಲ್ಲೂರ



ಭದ್ರಾವತಿ: ಹಿರೇನಲ್ಲೂರು ಹೆಚ್.ಎಸ್. ವೀರಸಂಗಪ್ಪ
ದತ್ತಿ ಹಾಗೂ ಶ್ರೀ ಗ್ಯಾರಹಳ್ಳಿ ರಂಗಪ್ಪ ಗಂಗಮ್ಮ ದತ್ತಿ
ಉಪನ್ಯಾಸ, ದಿನಾಂಕ: ೨೨.೧.೨೦೨೨
ಚಿತ್ರದಲ್ಲಿ: ದಾಕ್ಷಾಯಣಮ್ಮ, ಮಲ್ಲಿಕಾಂಬ, ಕತ್ತಲಗೇರೆ
ತಿಮ್ಮಪ್ಪ, ಹೇಮಾವತಿ ಚಿಗಟೇರಪ್ಪ, ಶುಭ



ಹಾಸನ ಜಿಲ್ಲಾ ಶ.ಸಾ.ಪ. ಮತ್ತು ಜಿಲ್ಲಾ ಕದಳಿ ಮಹಿಳಾ ವೇದಿಕೆ: ಲಿಂ. ಗಂಗಮ್ಮನವರ ಸ್ಮರಣಾರ್ಥ ದತ್ತಿ ಉಪನ್ಯಾಸ ದಿನಾಂಕ: ೧೯.೦೨.೨೦೨೨, ಸಾನಿಧ್ಯ: ತನ್ನೀರುಹಳ್ಳ ಮಠದ ವಿಜಯಕುಮಾರಸ್ವಾಮಿಜಿ, ಶ್ರೀ ಸೋಮಶೇಖರ ಸ್ವಾಮಿಜಿ, ಡಾ. ಮಲ್ಲೇಶಗೌಡರು, ಎಂ.ಎನ್. ಕುಮಾರಸ್ವಾಮಿ ಇತರರು



ಅಣ್ಣಿಗೇರಿ ತಾಲೂಕು: ಲಿಂ. ನಾಗಪ್ಪ ಗುರುಲಿಂಗಪ್ಪ ಗದಗ ದತ್ತಿ ಹಾಗೂ ಲಲಿತಾ ಚಂದ್ರಶೇಖರ ಚೌಗಲ ದತ್ತಿ ಉಪನ್ಯಾಸ ದಿನಾಂಕ: ೨೨.೦೨.೨೦೨೨ ಚಿತ್ರದಲ್ಲಿ: ಯಲ್ಲಮ್ಮ ಗಡ್ಡಿ, ಸಿ.ಎಸ್. ಗೌಡನಾಯಕರ್, ಎನ್.ಎಂ. ಯಲಬುರ್ಗಿ, ಎಂ.ವಿ. ಮುತ್ತಲಗೇರಿ, ಎಸ್.ವಿ. ಪಾಟೀಲ



ದಾವಣಗೆರೆ: ಲಿಂ. ಶರಣೆ ಗೌಡಪ್ಪ ಗಂಗಮ್ಮ ಲಿಂ. ಶರಣಗೌಡಪ್ಪ ಹನುಮಪ್ಪ ಶಾಮನೂರು ದತ್ತಿ ಲಿಂ. ಕೆ.ಜಿ. ಕಲ್ಲಪ್ಪ ಮತ್ತು ಲಿಂ.ಕೆ.ಜಿ. ಲೋಕೇಶ್ವರಮ್ಮ ದತ್ತಿ ಉಪನ್ಯಾಸ, ದಿನಾಂಕ:೧೯.೨.೨೦೨೨ ಚಿತ್ರದಲ್ಲಿ: ಕೆ.ಬಿ. ಪರಮೇಶ್ವರಪ್ಪ, ಎಂ. ಪರಮೇಶ್ವರಪ್ಪ ಸಿರಿಗೆರೆ, ಪ್ರಸನ್ನ ಚಂದ್ರಪ್ರಭು, ದತ್ತಿದಾನಿಗಳು: ಗೌಡಪ್ಪ ಬಸವರಾಜಪ್ಪ, ಪಲ್ಲವಿ ಉಮೇಶ್ ಪಾಟೀಲ್, ಅನುಭಾವಿಗಳು: ಎಂ.ಕೆ. ಬಕ್ಕಪ್ಪ, ಜಿ.ಬಿ. ಚಂದ್ರಶೇಖರಪ್ಪ, ಪ್ರೇಮಾ ಸೋಮಶೇಖರಪ್ಪ, ಶೈಲಜಾ ಪಾಲಾಕ್ಷಪ್ಪ, ಲೀಲಾವತಿ ಶೇಖರಪ್ಪ, ಗೀತಾ ಬಸವರಾಜಪ್ಪ ಇತರರು

